## "ಸಿದ್ಧಗಂಗಾ" ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

ಸರ್ವಶ್ರೀ

1189 ಪಟೇಲ್ ಹೆಚ್. ಎಲ್. ಲೋಕನಾಥ್, ಹಡವನಹಳ್ಳಿ ಮತ್ತು ಅಂಚೆ ತುರುವೇಕೆರೆ ತಾ|| ತುಮಕೂರು ಜಿಲ್ಲೆ.

1190 ಆರ್. ಶ್ರೀನಿವಾಸ್, S/o ಜಿ. ರಾಮಣ್ಣ, ನಂ. 18 (ವೈಟ್ ಹೌಸ್) 9ನೇ ಮುಖ್ಯ ರಸ್ತೆ, ಶ್ರೀ ರಾಂಪುರಂ. ಬೆಂಗಳೂರು-560051

1191 ರಾಮೇಶ್ವರ ಪಾಟಲು.

1192 ಅಧ್ಯಕ್ಷರು ಮತ್ತು ಕಾರ್ಯದರ್ಶಿ, ಎಂ. ಪಿ. ಸಹಕಾರ ಸಂಘ. ನಿ ಸೋಮಲಾಪುರ ಮತ್ತು ಅಂಚೆ, ಗುಬ್ಬಿ. ತಾ|| ತುಮಕೂರು ಜಿಲ್ಲೆ

1193 ಹೆಚ್. ಹನುಮಂತಯ್ಯ, C/O ತಿಮ್ಮಯ್ಯ ಮಾಜಿ ಪ್ರಧಾನರು ನಂ. 186, ದಾಸರಹಳ್ಳಿ. ತುಮಕೂರು ರಸ್ತೆ, ಬೆಂಗಳೂರು-560007

1194 ಆರ್. ಬಿ. ಹಾದಿಮನಿ. ಬಿ.ಇ, ಇಂಜನಿಯರ್, ಬಸವಭವನ ದುರ್ಗಾವಿಹಾರ್ ಹತ್ತಿರ, ಬಾಗಲಕೋಟೆ. ಬಿಜಾಪುರ-ಜಿಲ್ಲೆ

1195 ಅಣ್ಣರಾವ್, ಬಿ.ಇ, ಇಂಜನಿಯರ್, ನಂ- 4 ಎಫ್. ಐ. ಸಿ, ಸಬ್ ಡಿವಿಸನ್ ಹುಣಸಾಗಿ-585215 ಗುಲಬರ್ಗಾ-ಜಿಲ್ಲೆ.

1196 ಶ್ರೀ ಶ್ರೀ ಶಿವರುದ್ರಸ್ವಾಮಿಗಳು, ಅಧ್ಯಕ್ಷರು. ಕಂಚುಗಲ್ ಬಂಡೇಮಠ. ಮಾಗಡಿ ತಾ|| ಬೆಂಗಳೂರು ಜಿಲ್ಲೆ.

1197 ಹೆಚ್. ಟಿ. ಪರಮೇಶ್ವರಪ್ಪ, ಉಪನ್ಯಾಸಕರು, ಸರ್ಕಾರಿ ಕಿರಿಯ ವಿದ್ಯಾಲಯ. ಗೋಡೆಕೆರೆ ಮತ್ತು ಅಂಚೆ ಸಿ.ಎನ್ ಹಳ್ಳಿ. ತಾ|| ತುಮಕೂರು-ಜಿಲ್ಲೆ.

1198 ಎಂ. ಶಿವರುದ್ರಯ್ಯ, S/o. ಮರಿಯಪ್ಪ, ಕಲ್ಯಾಣಭವನ್ ಜಂಗಮ ಕೋಟೆ-562144 ಸಿಡ್ಲಘಟ್ಟ. ತಾ|| ಕೋಲಾರ-ಜಿಲ್ಲೆ.

1199 ಶ್ರೀಮತಿ. ಸಂಧ್ಯಾರಾಣಿ, ತಂದೆ. ಆರ್. ಸಿ. ಜಗನ್ನಾಥ್ ಕಾಸ್ಮೆಟಿಕ್ಸ್ ಡೀಲರ್, ಚಿಕ್ಕಬಳ್ಳಾಪುರ. ಕೋಲಾರ-ಜಿಲ್ಲೆ.

# ಸಿದ್ಧಗಂಗಾ

ಸಂಪುಟ-೨೩ ಸಂಚಿಕೆ-೬ ಜೂನ್, ೧೯೮೭

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಇಂದ್ರ ಪದವಿಗಿಂತ ಚಂದ್ರ ಪದವಿಗಿಂತ
ನಿನ್ನ ಪಾದದ ಪದವಿ ಮಿಗಿಲಹುದು। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಸಾಗರ ಸದೃಶ ನನ್ನ ಸ್ವಾಮಿ ಶ್ರೀಗುರುವೆ
ಮೋಕ್ಷದ ಮೂರುತಿಯೆ ಶ್ರೀಧರೆಯೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಬರೆವ ಲೆಕ್ಕಣಿಕೆಯಲಿ ಅಕ್ಕರವಾಗಿರಲು ತಿಹೆ
ಬರೆವ ಹಾಳೆಯ ಮೇಲೆ ನಗುತಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್.ವಿ. ವೀರಭದ್ರಯ್ಯ.

# ಸಿದ್ಧಗಂಗಾಂತರಂಗ







# ಶ್ರೀವಾಣಿ

## ಜನತೆಯ ಭಾವನೆ ಬದಲಾಗಿದೆ

ಇತ್ತೀಚಿನ ತಲೆಮಾರಿನ ಜನತೆಯ ಭಾವನೆಗಳು ತೀರಬದಲಾವಣೆ ಗೊಂಡಿವೆ. ಇದಕ್ಕೆ ಕಾರಣ ಪಾಶ್ಚಾತ್ಯ ಸಂಸ್ಕೃತಿ ಮತ್ತು ವಿಜ್ಞಾನದ ಬೆಳವಣಿಗೆ ರಾಜಕೀಯದಲ್ಲಿ ಬೇರು ಬಿಟ್ಟಿರುವ ವಿಶೇಷ ಶ್ರದ್ಧಾ ಶಕ್ತಿಗಳೆನ್ನಬಹುದು. ಬುದ್ಧಿ ಶಕ್ತಿಯ ಬೆಳವಣಿಗೆಯಿಂದ ಸುಖವಾಗಿ ಬಾಳುತ್ತೇವೆಂದು ಅದರಲ್ಲಿ ಶ್ರದ್ಧಾ ಶಕ್ತಿಯನ್ನು ವಿಶೇಷವಾಗಿ ತೋರಿಸುತ್ತ ಹೃದಯ ಶಕ್ತಿಯ ಬೆಳವಣಿಗೆಯನ್ನು ಕುಂಠಿತಗೊಳಿಸತೊಡಗಿದೆ. ಬುದ್ಧಿಯ ಬೆಳವಣಿಗೆಯನ್ನು ಯಾರೂ ಅಸ್ವೀಕಾರ ಮಾಡರು. ಆದರೆ ಅದಕ್ಕೆ ಸಮ ಸಮವಾಗಿಯೇ ಹೃದಯ ಸೌಂದರ್ಯವನ್ನು ಬೆಳೆಸಿಕೊಂಡಾಗಲೇ ಮಾನವ ಮಾನವನಾಗಿ ಬಾಳಿಯಾನು. ಕೇವಲ ಬುದ್ಧಿಯ ಬೆನ್ನು ಹತ್ತಿ ಹೋಗಿ ವಂಚನೆಗೊಳಗಾಗುತ್ತಿದ್ದಾನೆ. ಸ್ವಾರ್ಥದ ಬಲೆಗೆ ಬಿದ್ದು ಅಂತಃಕರಣದ ಕೊಲೆ ಮಾಡುವುದು ಯಾವ ಕಾಲಕ್ಕೂ ಯುಕ್ತವಾಗಲಾರದು. ಅಗಾಧ ಬುದ್ಧಿಶಾಲಿಗೂ ಕೂಡ ಸ್ವಪ್ನದಲ್ಲಿ ಸಹ ಕಾಣಲಾಗದ ಸ್ಥಾನಕ್ಕೆ ಮುಟ್ಟಿಸುವ ಸಾಮರ್ಥ್ಯ ಅಂತಃಕರಣಕ್ಕೆ ಇದೆ. ಅಂತಃಕರಣಗಳು ಶಿವ ಸಂಕಲ್ಪಭರಿತವಾಗಬೇಕು. ಬುದ್ಧಿಯು ಯಾವಾಗಲೂ ಸಂಶಯದ್ದು; ತರ್ಕದಲ್ಲಿ ಅಸಕ್ತವಾದದ್ದು; ಮುಖ್ಯವಾಗಿ ಒಹು ಲೆಕ್ಕಾಚಾರದ್ದು. ಅಂತಃಕರಣದ ಕೆಲಸ ತೃಪ್ತಿಯದು; ವ್ಯಕ್ತಿಯ ತೇಜೋವಿಶೇಷವನ್ನು ಬೆಳೆಸುವಂತಹದು; ಉತ್ತಮ ರೀತಿಯಲ್ಲಿ ಅಂತಃಕರಣ ಶುದ್ಧಿಯನ್ನು ಬೆಳೆಸಿಕೊಂಡವರಿಗೇ ಅತೀಂದ್ರಿಯ ಜ್ಞಾನ ಲಭ್ಯವಾಗುವುದಲ್ಲದೆ, ಬುದ್ಧಿ ಶಕ್ತಿಯುಳ್ಳವನಿಗಲ್ಲ. ಇದನ್ನರಿತು ನಾವು ಧರ್ಮಶ್ರದ್ಧೆಯನ್ನು ಬೆಳೆಸಿಕೊಂಡು ಶ್ರದ್ಧಾಂತಃಕರಣವನ್ನು ಪಡೆಯಲು ಪ್ರಯತ್ನಿಸಬೇಕು. ಅಂಥ ವಿದ್ಯೆಯನ್ನು ಧಾರ್ಮಿಕ, ಆಧ್ಯಾತ್ಮಿಕ, ಶಿವಾನುಭವ ತತ್ವ ಸಮ್ಮೇಳನಗಳು ಮನುಷ್ಯನಿಗೆ ಬೋಧಿಸುತ್ತವೆ. ಇಂಥ ಸನ್ನಿವೇಶಗಳನ್ನು ಆಗಾಗ್ಗೆ ಕಲ್ಪಿಸಿಕೊಂಡು ಪರಸ್ಪರ ಅನುಭವದ ವಿಚಾರಗಳನ್ನು ಕುರಿತು ಯೋಚನೆ ಮಾಡುವಂತಾಗಬೇಕು. ಆಗ ಧಾರ್ಮಿಕಶ್ರದ್ಧೆ ಬೆಳೆದು ಬರುತ್ತದೆ. ಚಿಕ್ಕ ಮಕ್ಕಳಿಗೆ ಹೆಣ್ಣು ಮಕ್ಕಳಿಗೆ ಧಾರ್ಮಿಕ ಸಂಸ್ಕಾರ ಲಭ್ಯವಾಗುತ್ತದೆ. ಸಂಘ ಸಂಸ್ಥೆಗಳು, ಮಠಮಾನ್ಯಗಳು ಅಲ್ಲಲ್ಲಿ ಆಗಾಗ ಇಂತಹ ಧಾರ್ಮಿಕ ಸಮ್ಮೇಳನಗಳನ್ನು ಜರುಗಿಸಿ ತನ್ಮೂಲಕ ಅನೇಕ, ಶಿವಾನುಭಾವಿಗಳಿಂದ ಪುರಾಣ-ಪ್ರವಚನ-ಕೀರ್ತನೆ ಭಾಷಣ ಇತ್ಯಾದಿಗಳನ್ನೇರ್ಪಡಿಸಿ ವಿಶ್ವ ಧರ್ಮ ಪರಿಪಾಲನೆಯ ನಿಜಾಚರಣೆಗಳಿಗೆ ಗಮನ ಕೊಡುವತ್ತ ಪರಂಪರಾನುಗತವಾಗಿ ಬಂದ ಸಂಸ್ಕೃತಿಯ ಪ್ರಕಾಶವನ್ನು ಉಜ್ವಲಗೊಳಿಸುವತ್ತ ಹೋಗಬೇಕಾದುದು ಅನಿವಾರ್ಯ.

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಡಾ॥ ಚನ್ನಪ್ಪ ಎರೇಸೀಮೆ

ಸಂಪಾದಕರು

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಬಿ. ವೀರಭದ್ರಯ್ಯ

ಟಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 20-00 ರೂ

ಆಜೀವ ಸದಸ್ಯತ್ವ 201-00 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

## ಯಾರು ಸಂಸ್ಕಾರ ಹೀನರು?

ಸಂಸ್ಕಾರ ಎಂಬುದು ಒರಟನ್ನು ಮೃದು ಮಾಡುವ, ಮೃಗತ್ವವನ್ನು ಮಾನವತ್ವದ ಕಡೆಗೆ ತಿರುಗಿಸುವ, ರಾಕ್ಷಸತ್ವದಿಂದ ದೇವತ್ವಕ್ಕೇರಿಸುವ, ಕೃತಘ್ನತೆಯಿಂದ ಕೃತಜ್ಞತೆಯ ಕಡೆಗೆ ಕರೆದೊಯ್ಯುವ, ಹಸಿದು ಬಂದವರಿಗೆ ತುತ್ತು ಅನ್ನನೀಡುವ, ಬಿಸಿಲಲ್ಲಿದ್ದವರನ್ನು ನೆರಳಿಗೆ ಕರೆಯುವ, ದಿಕ್ಕಿಲ್ಲದವರಿಗೆ ದಿಕ್ಕು ತೋರಿಸುವ, ಕತ್ತಲಲ್ಲಿ ಕೊಳೆಯುವ ಸ್ಥಿತಿಯಿಂದ ಬೆಳಕಿನೆಡೆಗೆ ಕರೆದು ತರುವ, ಅನಕ್ಷರಸ್ಥರನ್ನು, ಅಕ್ಷರಸ್ಥರನ್ನಾಗಿಸುವ, ಪ್ರಾಕೃತರನ್ನು ಸಂಸ್ಕೃತರನ್ನಾಗಿಸುವ, ಬಯ್ದವರನ್ನೂ ಬಂಧುಗಳೆನ್ನುವ, ಹೊಯ್ದವರನ್ನು ಹೊರೆದವರೆನ್ನುವ ತನ್ನನ್ನು ತೇದುಕೊಂಡು ನರುಗಂಪುನೀಡುವ, ತಾನು ಉರಿದರೂ ಬೆಳಕು ನೀಡುವ, ಬಿತ್ತಿದರೆ ಬೆಳೆಯುವ ಗುಣವುಳ್ಳದ್ದು.

ತಮ್ಮ ಇಪ್ಪತ್ತೆರಡನೆಯ ವರ್ಷದಿಂದ ಎಂಬತ್ತು ವರ್ಷಗಳ ಇಂದಿನವರೆಗೂ ಜಿತೇಂದ್ರಿಯರಾಗಿ, ಶ್ರೋತ್ರಿಯತ್ವ, ಬ್ರಹ್ಮನಿಷ್ಠರಾಗಿ, ಸಮಾಜದ ಅಭಿವೃದ್ಧಿಗಾಗಿ, ಲಕ್ಷಾಂತರ ಬಡಮಕ್ಕಳ ಅಭಿವೃದ್ಧಿಗಾಗಿ, ಜಾತಿ-ಮತ-ಪಂಥಗಳನ್ನೆಣಿಸದೆ ಸೇವೆ ಮಾಡುತ್ತಿರುವ ತ್ಯಾಗಮೂರ್ತಿಗಳು ಸಂಸ್ಕಾರಹೀನರೆ? ಮೈಲಿಮೈಲಿಗಳುದ್ದಕ್ಕೆ ಕಾಲು ನಡಿಗೆಯಲ್ಲಿ ಸುತ್ತಿ, ಧನ, ಧಾನ್ಯ ಸಂಗ್ರಹಿಸಿ, ಅದೆಷ್ಟೋ ಮಕ್ಕಳ ಹೊಟ್ಟೆತುಂಬಿಸಿ ವಿದ್ಯಾಭ್ಯಾಸಮಾಡಿಸಿ, ಅವರನ್ನೆಲ್ಲ ಸಮಾಜದಲ್ಲಿ ಗೌರವ-ಮರ್ಯಾದೆಗಳಿಂದ ಬಾಳುವಂತೆ ಶ್ರಮಿಸಿದವರು ಸಂಸ್ಕಾರಹೀನರೆ?

ಆಧ್ಯಾತ್ಮವೆಂಬುದು ಕೇವಲ ಏಕಾಂತದ ಏಳಿಗೆಯಲ್ಲ, ಲೋಕಾಂತದ ಪ್ರಗತಿಯೂ ಹೌದು ಎಂಬುದನ್ನು ಅಕ್ಷರಶಃ ಆಚರಣೆಯಲ್ಲಿಟ್ಟುಕೊಂಡಿರುವವರು ಸಂಸ್ಕಾರಹೀನರೆ? ಬಂದ ಭಕ್ತರಿಗೆಲ್ಲ 'ಊಟವಾಯಿತೆ' ಎಂದು ಮೊದಲು ಹೊಟ್ಟೆ ನೋಡುವ ಮಾತೃವಾತ್ಸಲ್ಯದ ಹೃದಯ ಸಂಸ್ಕಾರಹೀನರೆ?

ತಮ್ಮ ಆಶ್ರಯದಲ್ಲಿದ್ದುಕೊಂಡೇ ಬೆಳೆದು ಬಂದ ತಮ್ಮನ್ನೇ ದೂರುವವರನ್ನೂ ಸಮತಾಭಾವದಿಂದ ನೋಡುವವರು ಸಂಸ್ಕಾರಹೀನರೆ?

ಮಹಾಭಾರತದ ಒಂದು ಮಾತು ಹೀಗಿದೆ. ಬ್ರಾಹ್ಮಣ್ಯ ಯಾವುದರಿಂದ ಬರುತ್ತದೆ? ಎಂಬ ಪ್ರಶ್ನೆಗೆ ಧರ್ಮರಾಜ ಉತ್ತರ ಹೇಳಿದ-ಬ್ರಾಹ್ಮಣ್ಯ ಬರುವುದು ಅಧಿಕಾರದಿಂದಲ್ಲ, ಐಶ್ವರ್ಯದಿಂದಲ್ಲ, ಕುಲದಿಂದಲ್ಲ, ಬಲದಿಂದಲ್ಲ, ವಿದ್ಯೆಯಿಂದಲ್ಲ, ಬ್ರಾಹ್ಮಣ್ಯ ಬರುವುದು ಶೀಲಸಂಪತ್ತಿನಿಂದ-ಎಂಬುದಾಗಿ, ಬ್ರಾಹ್ಮಣ್ಯ ಮತ್ತು ಸಂಸ್ಕಾರ ಒಂದೇನಾಣ್ಯದ ಎರಡು ಮುಖಗಳು. ಸಂಸ್ಕಾರಹೀನರು ಯಾರು? ಆತ್ಮಶೋಧನೆ ಮಾಡಿಕೊಳ್ಳಬೇಕು.

# ಗ್ರಾಮಾಂತರ ಬಸವ ಜಯಂತಿ

–ಹೆಚ್. ವಿ. ವೀರಭದ್ರಯ್ಯ

ಆತ್ಮೀಯ ಶರಣ ಬಂಧುಗಳೇ!

ಚಿತ್ರದುರ್ಗ ಜಿಲ್ಲೆ ಇತಿಹಾಸ ಪ್ರಸಿದ್ಧವಾದುದೆಂಬುದನ್ನು ನೀವು ಬಲ್ಲಿರಿ. ತಾಲ್ಲೂಕು ಕೇಂದ್ರವಾದ ಹೊಸದುರ್ಗಕ್ಕೂ ತನ್ನದೇ ಆದ ಇತಿಹಾಸವಿದೆ, ಪರಪ್ಪ ಸ್ವಾಮಿಗಳ ಕರ್ಮಕ್ಷೇತ್ರವಾದ ಶ್ರೀರಾಮಪುರ ಒಂದಾನೊಂದು ಕಾಲದಲ್ಲಿ ಬಾದಾಳು ಎಂದು ಪ್ರಸಿದ್ಧವಾಗಿತ್ತು. ಕಲ್ಪವೃಕ್ಷಗಳ ನಾಡಾದ ಆ ಪ್ರದೇಶದ ಹಾರೋಗೊಂಡನ ಹಳ್ಳಿ ಪರಪ್ಪಸ್ವಾಮಿಗಳ ಆವಾಸ ಕ್ಷೇತ್ರ. ದಿನಾಂಕ 19. 4. 1986 ರಂದು ಅಲ್ಲಿ ಬೃಹತ್ತಾದ ಆರಾಧನಾ ಸಮಾರಂಭ ಅದೇ ಸಂದರ್ಭದಲ್ಲಿ ಬಸವ ಜಯಂತಿ. ಗ್ರಾಮೀಣ ಬಂಧುಗಳ ಬಿನ್ನಹಕ್ಕೆ ಪರಮ ಪೂಜ್ಯರು ಒಪ್ಪಿಗೆಕೊಟ್ಟರು. ಸಭೆ, ಸಮಾರಂಭಗಳು, ಹಬ್ಬಹರಿದಿನಗಳು, ಜಾತ್ರೆ ಜಂಗುಳಿಗಳು ಕಾಲ ಹರಣದ, ಕಾಡು ಹರಟೆಯ ಘಟನೆಗಳಾಗಬಾರದು. ನಮ್ಮ ಸಂಸ್ಕೃತಿಯ ಪ್ರತೀಕಗಳಾಗಬೇಕು. ಮಹಾಪುರುಷರ, ಸಂತರ, ಶರಣರ ಜೀವನಾದರ್ಶಗಳು, ಮೌಲ್ಯಗಳು ಮಾರ್ಗದರ್ಶನವಾಗಬೇಕು, ಸಾವಿರ ಜನ ಕಲೆತಕಡೆ ಬಸವಾದಿ ಶರಣರ ಸಂದೇಶ ಪರಿಚಯ ಮಾಡಿಕೊಟ್ಟರೆ ಹತ್ತು ಜನರಾದರೂ ಆ ಬಗ್ಗೆ ಚಿಂತಿಸಿಯಾರು, ಐದು ಜನರಾದರೂ ಆ ಮಾರ್ಗದಲ್ಲಿ ಹೆಜ್ಜೆಯಿಟ್ಟಾರು ಎಂಬ ತುಂಬು ಆಶಯ ಪರಮ ಪೂಜ್ಯ ಶ್ರೀ ಶ್ರೀ ಗಳವರಿಗೆ.

ಅಂದು ಆದುದು ಹಾಗೆಯೇ, ಹಾರೋಗೊಂಡನಹಳ್ಳಿ ಪರಪ್ಪಸ್ವಾಮಿಗಳ ಜಾತ್ರಾಮಹೋತ್ಸವದಲ್ಲಿ ಪಾಲ್ಗೊಂಡಿತ್ತು. ಊರಿನ ವಿಚಾರವಂತರು ಬಸವ ಜಯಂತಿಯನ್ನು ಅಳವಡಿಸಿದರು. ಕಾಲಕ್ಕೆ ಸರಿಯಾಗಿ ಕಾರ್ಯಕ್ರಮ ಪ್ರಾರಂಭವಾಯಿತು. ಪರಮ ಪೂಜ್ಯ ಶ್ರೀ ಶ್ರೀ ಗಳವರ ಅಧ್ಯಕ್ಷತೆ.

ಚಿತ್ರದುರ್ಗ ಜಿಲ್ಲೆಯ ಪೋಲೀಸ್ ಮುಖ್ಯಾಧಿಕಾರಿಗಳಾದ ಶ್ರೀ ಶಂಕರ ಬಿದರಿಯವರು ಮಾತನಾಡುತ್ತ ಬಸವಣ್ಣನವರು ಕ್ರಿಯಾ ಶೀಲ ವ್ಯಕ್ತಿ, ಸದುವಿನಯಕ್ಕೆ ಇನ್ನೊಂದು ಹೆಸರು ಮಾನವತಾವಾದಿ. ಅಪ್ರತಿಮ, ಹೋರಾಟಗಾರ. ರಾಜಕೀಯ-ಧರ್ಮಗಳನ್ನು ಸಮರಸವಾಗಿ ಬೆಸೆದ ಧೀಮಂತ. ಅಂತಹ ಮಹಾನುಭಾವರ ಸಂದೇಶವನ್ನು ಹಳ್ಳಿ ಹಳ್ಳಿಗೂ ಸಾರುತ್ತ ಹೊರಟಿರುವ ಪರಮ ಪೂಜ್ಯ ಶ್ರೀ ಶ್ರೀ ಗಳವರು ಪವಿತ್ರ ಸೇವೆಯಲ್ಲಿ ತೊಡಗಿದ್ದಾರೆ–ಎಂಬುದಾಗಿ ನುಡಿದರು.



ಸಿದ್ಧಗಂಗಾ ಶ್ರೀ ಶ್ರೀ ಗಳವರ ವ್ಯಕ್ತಿತ್ವ ಅಗಾಧವಾದದ್ದು, ಅವರಂಥ ಮತ್ತೊಬ್ಬ ಶ್ರೀ ಶ್ರೀ ಗಳನ್ನು ಕಾಣುವುದು ವಿರಳ, ಅಂಥವರು ಜನ ಜಾಗೃತಿ ಕಾರ್ಯದಲ್ಲಿ ಬಸವ ಸಂದೇಶದ ಮೂಲಕ ಮಾಡುತ್ತಿರುವ ಸೇವೆ ಶ್ಲಾಘನೀಯವಾದುದೆಂದು ಶಾಸಕ ಶ್ರೀ ರಾಮದಾಸ್ ಹೇಳಿದರು.

ಚಿತ್ರದುರ್ಗದ ಸರ್ಕಾರಿ ಕಾಲೇಜಿನ ಕನ್ನಡ ಉಪನ್ಯಾಸಕರಾದ ಶ್ರೀ ಶ್ರೀಶೈಲಾರಾಧ್ಯರು ಮಾತನಾಡುತ್ತ ಬಸವಾದಿ ಶರಣರ ಅಗತ್ಯ ಇಂದು ಎಂದಿಗಿಂತ ಹೆಚ್ಚು ಅಗತ್ಯವೆಂದು ಉಪನ್ಯಾಸ ಮಾಡಿದರು.

ಬಸವತತ್ವಗಳು ಹಳ್ಳಿಗರ ಹೃದಯದಲ್ಲಿವೆ, ಬಾಳಿನಲ್ಲಿ ಬದುಕಿನಲ್ಲಿ ಬೇರು ಬಿಟ್ಟಿವೆ. ಅಂಥವರು ಪ್ರಚಾರಕ್ಕೆ, ಪ್ರದರ್ಶನಕ್ಕೆ, ಕಾಣುವುದಿಲ್ಲ. ವಿನಯ ಮುಖಿಗಳಾಗಿ ಗ್ರಾಮ ಜೀವನದಲ್ಲಿ ಜೀವಿಸಿದ್ದಾರೆ. ಅವರ ಅನುದಿನದ ಹಾಡುಗಳಲ್ಲಿ ಸುಖ-ದುಃಖಗಳಲ್ಲಿ 'ಬಸವ' ನಾಮಸ್ಮರಣೆ ನಡೆದಿದೆ ಎಂಬುದನ್ನು ಶ್ರೀ ಹೆಚ್. ವಿ. ವೀರಭದ್ರಯ್ಯ ಅವರು ವಿಶ್ಲೇಷಿಸಿದರು.

ಬಸವ ಜಯಂತಿಯು ಆಚರಣೆಯಿಂದ ನಾವೆಲ್ಲ ಕಲಿಯಬೇಕಾಗಿರುವುದು ಜೀವನ ಕಲೆಯನ್ನು. ಭಗವಾನ್ ಬಸವಣ್ಣನವರು ನಮಗೆ ಅದನ್ನು ಆಚರಿಸಿ ತೋರಿಸಿದ್ದಾರೆ. ನಡೆ, ನುಡಿ, ಊಟ, ಉಡಿಗೆ, ತೊಡುಗೆ, ಜನನ–ಮರಣ ಇಲ್ಲೆಲ್ಲ ಅರಿತು ಆಚರಿಸುವುದಿದೆ. ದುಡಿದು ತಿನ್ನುವ ಮನೋಧರ್ಮ ನಮ್ಮದಾಗಬೇಕು. ಇಂದು ಯುವಜನಾಂಗ ಹಲವು ದುಶ್ಚಟಗಳಿಗೆ ಬಲಿಯಾಗಿ ಜೀವನದ ಅಮೂಲ್ಯ ಮೌಲ್ಯವನ್ನು ಮರೆಯುತ್ತಿದ್ದಾರೆ. "ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ, ನಿನ್ನೊಡವೆಯೆಂಬುದು ಜ್ಞಾನರತ್ನ" ಎಂಬುದನ್ನೇ ಮರೆತಿದ್ದಾರೆ. ಬಸವಾದಿ ಶರಣರು ಜ್ಞಾನರತ್ನಗಳಾಗಿ, ಅನುಭವದ ರತ್ನಗಣಿಗಳಾಗಿ, ಕಾಯಕದ ಕಟ್ಟಾಣಿಗಳಾಗಿ, ದಾಸೋಹದ ಶಿವಕಲಶಗಳಾಗಿ ಬೆಳಗಿದರು. ಅವರ ಆದರ್ಶಗಳು ಇಂದು ನಮಗೆ ದಾರಿದೀಪವಾಗಬೇಕು ಎಂದು ಪರಮ ಪೂಜ್ಯರು ಅಧ್ಯಕ್ಷ ಪೀಠದಿಂದ ಆಶೀರ್ವಚನ ಮಾಡಿದರು.

ರಾತ್ರಿ ಹತ್ತು ಘಂಟೆಗೆ ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶಿತವಾಯಿತು. ನಾಟಕ ನೋಡಿದ ತೆಂಗಿನ ಸೀಮೆಯ ಜನ ಬೆಕ್ಕಸ ಬೆರಗಾಗಿ ಹೋದರು. ಎಲ್ಲರ ಬಾಯಲ್ಲು ಅದೇ ಮಾತು, ಅದೇ ಹಾಡು. ನಾಟಕ ಮುಗಿದಾಗ ತೆಂಗಿನಗರಿಗಳ ಮಧ್ಯೆ ತೂರಿ ಬರುತ್ತಿದ್ದವು ಸೂರ್ಯನ ಬಂಗಾರದ ಕಿರಣಗಳು

## ಮಾಣಿಕ್ಯ ದೀಪ್ತಿ:-

### ವಿದ್ಯಾಭ್ಯಾಸ.

ಅನಾದಿ ಕಾಲದಿಂದಲೂ ಭಾರತದೇಶದಲ್ಲಿ ವಿದ್ಯೆಯನ್ನು ಕಲಿಯಲು ಹೆಚ್ಚಿನ ಪ್ರೋತ್ಸಾಹವನ್ನು ನೀಡುತ್ತಾ ಬಂದಿದ್ದಾರೆ.

ಮಕ್ಕಳಿಗೆ, ತಂದೆ ಬಾಲ್ಯದೊಳ್ ಅಕ್ಕರ ವಿದ್ಯೆಗಳ
ಕಲಿಸದಿರ್ದೊಡೆ ಕೊಂದಂ
ಚಿಕ್ಕಂದಿನ ವಿದ್ಯೆ ಪೊರೆಗು ಚೂಡಾರತ್ನ ||

ಎಂಬ ಪದ್ಯದಂತೆ ತಂದೆ ತಾಯಿಗಳು ಮಕ್ಕಳು ಚಿಕ್ಕವರಿರುವಾಗಲೇ ವಿದ್ಯೆಯನ್ನು ಕಲಿಸಬೇಕು ಎಂಬುದನ್ನೇ ಸಾರಿಹೇಳುತ್ತದೆ.

ತಂದೆ ತಾಯಿಗಳ ಪ್ರೇಮಮಯ ವಾತಾವರಣದಲ್ಲಿ ಮಗು ಬೆಳೆದು ಉತ್ತಮ ಗುರುಗಳ ಸೇವೆಯಿಂದ, ಅವರ ವಿದ್ಯಾದಾನವನ್ನು ಮನಸಾರೆ ಭಕ್ತಿಯಿಂದ ಆಲಿಸಿ, ಅರಿತು ಶ್ರದ್ಧೆಯಿಂದ ಅದನ್ನು ಅಳವಡಿಸಿಕೊಂಡರೆ; ನಿಜವಾಗಿಯೂ ಉತ್ತಮನಾಗುವದರಲ್ಲಿ ಸಂಶಯವೇಯಿಲ್ಲ.

ವಿದ್ಯೆಯು ಮನುಷ್ಯನಿಗೆ ಒಂದು ಅಪೂರ್ವವಾದವರ. ತಿಳಿವಳಿಕೆಯುಳ್ಳ, ವಿವೇಚನೆಯಿಂದ ಕೂಡಿದ ಮನುಷ್ಯನಿಗೆ ವಿದ್ಯೆಯು ಸತ್ಯ-ಅಸತ್ಯಗಳ ತಿಳಿವನ್ನು ಉಂಟುಮಾಡಿ ಅವನನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತದೆ. ಉತ್ತಮವಾದ ವಿದ್ಯೆಯು ಮನುಷ್ಯನಿಗೆ ಕಾಮಧೇನು. (ಶುದ್ಧಾಹಿ ಬುದ್ಧಿಃ ಕಿಲ ಕಾಮಧೇನುಃ)

ವಿದ್ಯೆಯನ್ನು ಹೇಗೆ ಕಲಿಯಬೇಕು? ಎಂಬುದು ಪ್ರಧಾನವಾದ ಅಂಶ ಇದನ್ನು ಹಿರಿಯರ ನಿರ್ದೇಶನದಂತೆ ಹೀಗೆ ಸಂಗ್ರಹಿಸಬಹುದು.

ಅವೃತ್ತಿಃ ಅರ್ಥಸಂಧಾನಂ ಸುತೀರ್ಥ್ಯೈಃ ಪರಿಶೀಲನಂ ।
ಲೇಖಂ ಅಧ್ಯಾಪನಂಚೇತಿ ಪಂಚ ವಿದ್ಯಾರ್ಥಿನೋಗುಣಾಃ ||

"ಗುರುಗಳು ಹೇಳಿದ್ದನ್ನು ಗಮನವಿಟ್ಟು ಕೇಳಬೇಕು, ಕೇಳಿದ್ದನ್ನು ಪುನಃ ಪುನಃ ಮನನಮಾಡಬೇಕು, ಓದಬೇಕು, ಅರ್ಥವನ್ನು ತಿಳಿದುಕೊಳ್ಳಬೇಕು. ಸ್ನೇಹಿತರೊಡನೆ ಪರಿಶೀಲಿಸಿಕೊಳ್ಳಬೇಕು ಚರ್ಚಿಸಬೇಕು. ಸರಿಯೆಂದು ಅನಿಸಿದ್ದನ್ನು ಬರೆದಿಡಬೇಕು ಹಾಗೆ ಬರೆದಿಟ್ಟಿದ್ದನ್ನು ಬೇರೆಯವರಿಗೆ ಹೇಳಿಕೊಡಬೇಕು- ಹೀಗೆ ಅನವರತವೂ (ಯಾವಾಗಲೂ) ಅಭ್ಯಾಸವನ್ನು ಮಾಡಬೇಕು.

(43 ನೇ ಪುಟ ನೋಡಿ)



## ಭಸವ ಪ್ರತಿಜ್ಞಾ

–ಟಿ. ಎನ್. ಮಹಾದೇವಯ್ಯ.

"ನ್ಯಾಯ ನಿಷ್ಠುರಿ ದಾಕ್ಷಿಣ್ಯಪರ ನಾನಲ್ಲ, ಲೋಕ ವಿರೋಧಿ ಶರಣನಾರಿಗಂಜುವನಲ್ಲ, ಕೂಡಲ ಸಂಗಮ ದೇವರ ರಾಜ ತೇಜದಲ್ಲಿಪ್ಪನಾಗಿ.

ತನ್ನ ದೇಹದ ಮಾಂಸಖಂಡಗಳನ್ನು ತುಂಡು ತುಂಡಾಗಿ ಕತ್ತರಿಸಿ ಮಡಗಿದರೂ ಮಹಾತ್ಮರು ಎಂದೂ ಅಸತ್ಯವನ್ನು ಮನ್ನಿಸುವುದಿಲ್ಲ. ಎಂತಹ ಬಿಕ್ಕಟ್ಟಿನ ಪ್ರಸಂಗದಲ್ಲಿ ಸಿಕ್ಕಿ ಹಾಕ್ಕಿಕೊಂಡರೂ ಸತ್ಯದ ಮುಂದೆ ತಲೆಬಾಗುವರೇ ಹೊರತು ಆ ಸತ್ಯದ ಒಡೆತನವನ್ನು ಸ್ವೀಕರಿಸುವುದಿಲ್ಲ. ಒಬ್ಬನ ಸ್ನೇಹಕ್ಕಾಗಿಯಾಗಲಿ, ಮತ್ತಾವ ದೃಷ್ಟಿಯಿಂದಾಗಲಿ ಅವರು ಸತ್ಯವನ್ನು ಬಿಡರು. ಜೀವನವನ್ನು ಸಾಗರದಲ್ಲಿ ದಾಟಿಸಿ ದಡಕ್ಕೆ ಸೇರಿಸುವ ನೌಕೆಯು ಸತ್ಯವೆಂದು ಅದನ್ನು ಆಶ್ರಯಿಸುವರು. ಸತ್ಯ ಶೋಧನೆಗಾಗಿ ತನ್ನ ಸರ್ವಸ್ವದ ತ್ಯಾಗ ಮಾಡಿದ ಭಗವಾನ್ ಬುದ್ಧ ದೇವನು ಹೀಗೆಂದಿರುವನು. "ಏಳಿರಿ ಸೋಮಾರಿಗಳಾಗಬೇಡಿ. ಸದ್ಧರ್ಮವನ್ನಾಚರಿಸಿರಿ. ಧರ್ಮದಂತೆ ನಡೆಯುವವರಿಗೆ ಇಹಲೋಕದಲ್ಲಿ ಸುಖವು ದೊರೆಯುತ್ತದೆ. ಸತ್ಕರ್ಮವನ್ನು ಮಾಡಿರಿ. ದುಷ್ಕರ್ಮಗಳನ್ನು ಮಾಡಬೇಡಿರಿ. ಧರ್ಮದಂತೆ ನಡೆಯುವವರು ಇಹ ಪರಲೋಕಗಳಲ್ಲಿ ಸುಖವನ್ನು ಹೊಂದುವರು. ಧರ್ಮವನ್ನು ಪ್ರತಿಭಟಿಸುವವರೆಲ್ಲರೂ ಒಂದೇ ಒಂದು ದಿನ ಅದಕ್ಕೆ ಬಲಿಯಾಗಿ ಬೀಳುವರು. ಕಾಲ-ಚಕ್ರವು ಸುತ್ತಿದಂತೆ ಅವರ ಏರಿಳಿತಗಳು. ಒಮ್ಮೆ ಇಳಿದಾಗ ಹಳ್ಳಕ್ಕೆ ಬಿದ್ದು ಹಾಳಾಗಿ ಹೋಗುವರು. ಮತ್ತೆ ಏಳುವಂತಿಲ್ಲ.

ಧರ್ಮದ ನುಡಿಗಳನ್ನು ಬೋಧಿಸುವ ಬೋಧಕರು ಯಾವಾಗಲೂ ಲೋಕ ವಿರೋಧಿಗಳಾಗಿಯೇ ಇರುವರು. ಮನಬಂದಂತೆ ವ್ಯವಹರಿಸುವವರಿಗೆ ನಿಯಮಗಳ ಕಟ್ಟನ್ನು ಹಾಕಿದರೆ ಅವರು ಸಿಟ್ಟಿಗೇಳುವರು. ಯೇಸುಕ್ರಿಸ್ತ, ಬುದ್ಧದೇವ, ಮಹಮ್ಮದ ಮೊದಲಾದ ಎಲ್ಲ ಮಹಾತ್ಮರು ಈ ದಿಟ್ಟವಾದ ಹಿಂಸೆಯನ್ನು ಅನುಭವಿಸಿದರು. ಅವರ ಜೀವಿತ ಕಾಲದಲ್ಲಿ ಅವರ ತತ್ವಗಳನ್ನು ಮನ್ನಿಸಿದವರು ಬಹಳ ಕಡಿಮೆ. ಅವರ ನಂತರವೇ ಆಯಾ ಮತಗಳು ಜಗತ್ತಿನ ತುಂಬಾ ಹರಡಿದುವು. ಅನ್ಯಾಯದ ರುಚಿಯನ್ನುಂಡು, ಅತ್ಯಾಚಾರದಲ್ಲಿ ಮುಳುಗಿ, ಕುಹಕ ಆಡಂಬರಗಳನ್ನು ಆಚರಣೆಯಲ್ಲಿಟ್ಟುಕೊಂಡವರಿಗೆ ಅವುಗಳನ್ನು ಬಿಡಿರೆಂದರೆ ಬಿಡುವುದು ಹೇಗೆ ಸಾಧ್ಯ? ಸಿಟ್ಟಿಗೇಳುವರು. ಪರಮಾತ್ಮನ ನೆರವಿನಿಂದ ಕೆಲಸಮಾಡುವವರು ಯಾವುದಕ್ಕೂ ಹಿಂಜರಿಯುವುದಿಲ್ಲ. ಅವನ ಬಲದಲ್ಲಿ, ಒಲವಿನಲ್ಲಿ ನಂಬಿಕೆಯಿಟ್ಟು ಇವರು ಕೆಲಸಮಾಡುವರು. ಬಸವೇಶ್ವರರು ತನ್ನ ಅಂತಹ ಅನುಭವವನ್ನು ಇಲ್ಲಿ ನುಡಿದಿರುವರು.

ನಾನು ನ್ಯಾಯವನ್ನು ಮನ್ನಿಸುವೆನು. ದಾಕ್ಷಿಣ್ಯಕ್ಕೆ ಸೋಲುವವನಲ್ಲ. ಕೆಟ್ಟಜನರ ಲೋಕಕ್ಕೆ ವಿರೋಧಿಯಾದ ಶರಣರು ಪರಮಾತ್ಮನ ಕೃಪೆ ಕೋರುವುದರಿಂದ ಅವರು ಯಾರಿಗೂ ಅಂಜುವುದಿಲ್ಲ.

# ಹಿಂಸೆ—ಅಹಿಂಸೆ

—ಪ್ರೊ॥ ವಸಂತ ಕುಷ್ಟಗಿ

ಪ್ರಿನ್ಸಿಪಾಲ್, ಎಸ್. ಎಸ್. ಎಂ. ಕಾಲೇಜ್, ಶಹಬಾದ್-585228
ಜಿಲ್ಲೆ ಕಲಬುರ್ಗಿ ಕರ್ನಾಟಕ

ಹಿಂಸೆ ಮತ್ತು ಅಹಿಂಸೆಗಳು ಈ ಪ್ರಪಂಚದಲ್ಲಿ ಬಹುಕಾಲದಿಂದ ಬಳಕೆಯಾಗುತ್ತ ಬಂದಿರುವ ಪದಗಳು. ಹಿಂಸೆಯಲ್ಲಿ ಕ್ರೌರ್ಯನೆಲೆಗೊಂಡಿದ್ದು ಅದನ್ನು ರಾಕ್ಷಸೀ ಪ್ರವೃತ್ತಿಯೆಂದೂ ಅದರಿಂದ ಮನುಷ್ಯನು ದೂರವಿರಬೇಕೆಂದು ಬೋಧಿಸುವ ಸಾಧಕರು ಅನೇಕರಾಗಿ ಹೋಗಿದ್ದಾರೆ. ಈ ಹಿಂಸಾಮಾರ್ಗದಲ್ಲಿ ಸುಳಿದರೆ ಶಾಂತಿ ಸಮಾಧಾನಗಳು ದೊರೆಯುವುದಿಲ್ಲವೆಂದೂ ಮುಕ್ತಿಯು ಅಸಾಧ್ಯವೆಂದೂ ಅವರ ಹೇಳಿಕೆಗಳು ಸಾರುತ್ತಿವೆ. ಹೌದು ಹಿಂಸೆಯು ನೆಮ್ಮದಿಗೆ ಕಂಟಕಪ್ರಾಯ. ಅದಕ್ಕೆ ಪ್ರತಿಯಾಗಿ ನಾವು ಪ್ರೀತಿ ವಿಶ್ವಾಸಗಳಿಂದ ಅಹಿಂಸಾಮಾರ್ಗವನ್ನು ಅನುಸರಿಸಿದರೆ ವೈರಿಯೂ ನಮಗೆ ಗೆಳೆಯನಾಗುತ್ತಾನೆ. ಜೀವನದಲ್ಲಿ ಆನಂದ ಪ್ರಾಪ್ತಿಯೂ ಆಗುತ್ತದೆ. ಅಂತಹನಿಗೆ ಮೋಕ್ಷವು ಕಟ್ಟಿಟ್ಟ ಬುತ್ತಿ. ಇದನ್ನು ನಂಬಿ ಅನೇಕರು ಹೀಗೆ ಬಾಳಿದ್ದೂ ಉಂಟು.

ಬುದ್ಧನು ಅನುಕಂಪದ ಸ್ವರೂಪ. ಅವನ ಬದುಕೆಲ್ಲ ದಯಾಧರ್ಮಕ್ಕೆ ದೃಷ್ಟಾಂತ. ಅತನು ದುಃಖದ ಮೂಲವನ್ನು ಪತ್ತೆಹಚ್ಚುವಾಗ ದಯೆಯನ್ನು ಅನುಷ್ಠಾನಕ್ಕೆ ತಂದು ಅಹಿಂಸಾತ್ಮಕ ತತ್ತ್ವಕ್ಕೆ ಸತ್ತ್ವವನ್ನು ನೀಡಿದನೆನ್ನಬಹುದು. ಮುಂದೆ ಜೈನಧರ್ಮವಂತೂ ಅಹಿಂಸಾಪರಮೋಧರ್ಮಃ ಎಂಬುದನ್ನೇ ಪ್ರಪಂಚದ ತುಂಬೆಲ್ಲ ಪ್ರತ್ಯಕ್ಷೀಕರಿಸಲು ಪ್ರಯತ್ನಿಸಿತು. ಆ ತತ್ತ್ವದ ಮುಖಾಂತರ ತೀರ್ಥಂಕರರೆಲ್ಲ ಲೋಕ-ಜೀವನವನ್ನು ಹಸನುಗೊಳಿಸಿದ್ದು ನಿಜ. ಅನಂತರ ಬಸವಾದಿ ಪ್ರಮಥರು, 'ದಯವೇ ಧರ್ಮದ ಮೂಲವಯ್ಯ, ದಯೆಬೇಕು ಸಕಲ ಪ್ರಾಣಿಗಳಲ್ಲಿ" ಎಂಬುದನ್ನು ಅನುಷ್ಠಾನಕ್ಕೆ ತರಲು ಪ್ರಯತ್ನಿಸಿದರು. ಅನಂತರ ಮಹಾತ್ಮಗಾಂಧೀಜಿಯವರೂ ಕೂಡ 'ಒಂದು ಕಪಾಳಕ್ಕೆ ಹೊಡೆದರೆ, ತಿರುಗಿ ಹೊಡೆಯದೇ, ಹೊಡೆದವರಿಗೆ ಇನ್ನೊಂದು ಕಪಾಳವನ್ನು ಕೊಡು' ಎಂಬ ತತ್ತ್ವಕ್ಕೆ ಬಲವಾಗಿ ಅಂಟಿಕೊಂಡು ಅದನ್ನು ಸಾಧಿಸಿ, ಅಹಿಂಸಾತತ್ತ್ವದ ಮೇರುವಾದರು.



ಆದರೆ ಈ ರೀತಿ ಈಗ ಪ್ರಪಂಚದಲ್ಲಿ ಎಷ್ಟರಮಟ್ಟಿಗೆ ಶ್ರೀ ಸಾಮಾನ್ಯನಿಗೆ ಬದುಕಲು ಸಾಧ್ಯ. ಹೆಂಡತಿಯ ಮೈಮೇಲಿನ ಒಡವೆಗಳನ್ನು ಕಳವು ಮಾಡಲು ಬಂದ ಕಳ್ಳನನ್ನು ಕೂಡಲಸಂಗಮನೆಂದು ಬಸವಣ್ಣನವರು ತಿಳಿದಂತೆ ಎಷ್ಟು ಜನರಿಗೆ ತಿಳಿದುಕೊಳ್ಳಲು ಸಾಧ್ಯ. ಹಾಗೆ ನಡೆದರೆ ಬದುಕು ಸುಖಮಯವಾದೀತು. ಆದರೆ ಆ ಸಾಧನೆ ಎಷ್ಟು ಜನರಿಗೆ? ಅದರಲ್ಲಿಯೂ ಮೋಸ ವಂಚನೆ ದ್ವಿಮುಖ ಚಾಪಲ್ಯಗಳಿಂದ ಅನೇಕರ ಬದುಕು ಅಂತರಾಳ ವಿಕರಾಳವಾಗಿರುವಾಗ ಬುದ್ಧ ಜಿನ ಬಸವಣ್ಣರಂತೆ ಬದುಕಲು ಇಂದು ನಮಗೆಲ್ಲ ಅಸಾಧ್ಯದ ಮಾತಾಗಿದೆ. ಅದೆಲ್ಲ ಕೈಗೆ ನಿಲುಕದ ಕನ್ನಡಿಯ ಗಂಟೇಸರಿ. ಹಾಗೇನಾದರೂ ನಾವು ಆ ಮಹಾತ್ಮರಂತೆ ಬದುಕಲು ಪ್ರಯತ್ನಿಸಿದರೆ ಏಸುಕ್ರಿಸ್ತನನ್ನೇ ಶಿಲುಬೆಗೇರಿಸಿದ ಜನ ಮಹಾಜ್ಞಾನಿ ಸಾಕ್ರೆಟಿಸನಂತಹನಿಗೆ ವಿಷಕುಡಿಸಿದ ಜನ; ನೂತನ ಸತ್ಯಗಳನ್ನು ಕಂಡುಹಿಡಿದು ವಿಜ್ಞಾನಿಗಳನ್ನು ಜೀವಸಹಿತ ಭಸ್ಮ ಮಾಡಿದ ಜನ-ನಮ್ಮಂತಹ ಸಾಮಾನ್ಯರನ್ನು ಹಿಂಡಿಹಿಪ್ಪಿ ಮಾಡದೇ ಬಿಟ್ಟೀತೆ ?

ಒಂದು ಸಾಮಾನ್ಯ ಘಟನೆಯತ್ತ ನಾವು ಕಿಂಚಿತ್ ದೃಷ್ಟಿಹಾಯಿಸಿದರೆ ಇಂದಿನ ಸ್ಥಿತಿಯ ಅಂತರಾಳ ಗೊತ್ತಾಗುತ್ತದೆ. ನೋಡಿ ರೈಲಿನಲ್ಲಿ ಹೋಗುತ್ತಿರುವಾಗ ಪಕ್ಕದಲ್ಲಿ ಕುಳಿತ ಸಹಪ್ರಯಾಣಿಕನಿಗೆ ಕಾಲು ತಗಲಿತೆಂದು ಭಾವಿಸಿ ಆತನಿಗೆ ಒಂದು ಸಲ ನಮಸ್ಕಾರ ಮಾಡಿದರೆ ಆತನು ಪದೇ ಪದೇ ಕಾಲುತಾಗಿಸಲು ತೊಡಗಿದಾಗ ನಾವು ಪದೇ ಪದೇ ನಮಸ್ಕಾರ ಮಾಡಬೇಕೆ ? ಛೆ ! ಅಂತಹರಿಗೆ ನಮಸ್ಕಾರ ಮಾಡುವುದು ಸಂಸ್ಕೃತಿಯಲ್ಲ. ಕಾರಣ ಅಂತಹರಲ್ಲಿ ವಿವೇಕವೇ ಶೂನ್ಯವಾಗಿರುತ್ತದೆ. ಆದ್ದರಿಂದ ಇಂದಿನ ಇಂತಹ ಸಂದರ್ಭಗಳಲ್ಲಿ ಕೇವಲ ಮೆತ್ತಗಿದ್ದರೇ ಸಾಲದು ಹಿಂಸೆಯನ್ನು ಪ್ರತಿಭಟಿಸಲು ನಟನೆಯನ್ನಾದರೂ ಮಾಡಬೇಕು. ಈ ಮಾತಿಗೆ ಶ್ರೀ ರಾಮಕೃಷ್ಣ ಪರಮಹಂಸರು ನೀಡುವ ಉಪಾಯವೇದಾಂತದ ದೃಷ್ಟಾಂತಕ್ಕೆ ಮೊರೆಹೋಗಬೇಕು.

ಆ ದೃಷ್ಟಾಂತದ ಕತೆ ಇಂತಿದೆ :

ಒಂದು ಹಾದಿಯ ಪಕ್ಕದಲ್ಲಿ ಹುತ್ತ, ಅದರಲ್ಲೊಂದು ಸರ್ಪ. ಒಂದುದಿವಸ ಒಬ್ಬ ಸಾಧು ಆ ದಾರಿಯಲ್ಲಿ ಹೋಗುತ್ತಿದ್ದಾಗ ದನಕಾಯುವ ಹುಡುಗರು ಆತನನ್ನು ತಡೆದು, ಸರ್ಪ ಕಚ್ಚುತ್ತದೆ ಹೋಗಬೇಡವೆಂದರು. ಸಾಧು ತನ್ನ ಮಂತ್ರಶಕ್ತಿಯನ್ನು ಬಳಸಿ ಸರ್ಪದ ಬಳಿ ಹೋದ. ಸರ್ಪ ಹೆಡೆಯೆತ್ತಿ ಕಚ್ಚಲು ಬಂದು, ಶಕ್ತಿಗುಂದಿ, ಆತನ ಪಾದಗಳಮೇಲೆ ಬಿದ್ದಿತು. ಆಗ ಆತ, "ಇತರರಿಗೆ ಅನ್ಯಾಯವಾಗಿ ಹಿಂಸೆ ಮಾಡಬೇಡ, ಅಹಿಂಸಾವ್ರತದಿಂದ ಸಾಗಿದರೆ ನಿನಗೆ ದೇವರು ಕಾಣುತ್ತಾನೆ"

ಎಂದು ಬೋಧಿಸಿದ, ಅನಂತರ ಆ ದಾರಿಯಲ್ಲಿ ಸರ್ಪದ ಕಾಟ ತಪ್ಪಿತು; ಕೆಲವು ದಿವಸಗಳನಂತರ ಒಂದು ದಿವಸ ಆ ಹುಡುಗರು ಅದರ ಮೇಲೆ ಕಲ್ಲುಗಳನ್ನೆಸೆದರು. ಅದು ಕಚ್ಚಲಿಲ್ಲ. ಮತ್ತೊಂದು ದಿವಸ ಒಬ್ಬ ಧೂರ್ತ ಬಾಲಕ ಅದರ ಬಾಲವನ್ನು ಹಿಡಿದು ಗರ್‍ರನೆ ತಿರುಗಿಸಿ ನೆಲಕ್ಕೆ ಬಡಿದ. ಬಂಡಿಗೆ ಅದರ ತಲೆಯನ್ನು -ಅಪ್ಪಳಿಸಿದ. ಅದು ರಕ್ತಕಾರಿ ಕೆಳಗೆ ಬಿತ್ತು. ಹುಡುಗರೆಲ್ಲ ಅದು ಸತ್ತಿತೆಂದು ಭಾವಿಸಿದರು. ಆದರೆ ತಂಗಾಳಿ ಬೀಸಿದಾಗ ಅದು ಚೇತರಿಸಿಕೊಂಡು ಹುತ್ತ ಸೇರಿತು. ಕೆಲವು ದಿವಸಗಳನಂತರ ಸಾಧು ತಿರುಗಿ ಬಂದು ತನ್ನ ಸರ್ಪಶಿಷ್ಯನನ್ನು ಹುಡುಕಿದ. ಸಿಗಲಿಲ್ಲ, ದನ ಕಾಯುವ ಹುಡುಗರನ್ನು ವಿಚಾರಿಸಿದ. ಅವರು ಅದು ಸತ್ತುಹೋಯಿತೆಂದರು. ವಿಶ್ವಾಸ ಮೂಡಲಿಲ್ಲ. ಮತ್ತೆ ಸುತ್ತೆಲ್ಲ ಹುಡುಕಿ ಕರೆದಾಗ ಅದು ಧ್ವನಿಯ ಗುರುತು ಹಿಡಿದು ಹೊರಗೆ ಬಂದು ನಡೆದ ಕತೆಯನ್ನು ಹೇಳಿತು. ಆಗ ಸಾಧು, ಓ ಅಯ್ಯೋ ಹುಚ್ಚೆ! ಪೆಚ್ಚೆ! ಯಾರನ್ನೂ ಹಿಂಸೆ ಮಾಡಬೇಡವೆಂದರೆ ಕಚ್ಚಿಕೊಲ್ಲ ಬೇಡವೆಂದು ಹೇಳಿದೆನಷ್ಟೆ! ಬುಸ್ಸೆಂದು ಹೆದರಿಸಿ ಓಡಿಸ ಬೇಡವೆಂದು ಹೇಳಿದೆನೆ? ಅವರು ನಿನ್ನನ್ನು ಪೀಡಿಸದಂತೆ ನೋಡಿಕೊಳ್ಳುವ ಉಪಾಯ ಗೊತ್ತಾಗಲಿಲ್ಲವೇ? ಸುಮ್ಮನೆ ಬುಸ್ಸೆಂದರೆ ಸಾಕಾಗಿತ್ತು. ಆ ಹುಡುಗರು ನಿನ್ನಗೋಜಿಗೆ ಬರುತ್ತಿರಲಿಲ್ಲ" ಎಂದು ಹಿಂಸೆ-ಅಹಿಂಸೆಯ ಪದಗಳ ಧ್ವನಿಯನ್ನು ತಿಳಿಸಿ ಅದನ್ನು ವಿವೇಕಗೊಳಿಸಿದ.

ಈ ಮನೋಹರವಾದ ಸಾಮತಿಯನ್ನು ಪರಮಹಂಸರು ತಮ್ಮ ಶಿಷ್ಯರಿಗೆ ಹೇಳಿ, "ಈ ಪ್ರಪಂಚದಲ್ಲಿ ಬದುಕುವವನು ಯಾರಿಗೂ ಹಿಂಸೆ ಮಾಡಬಾರದು. ಆದರೆ ದುಷ್ಟರನ್ನು ದೂರವಿಡುವುದಕ್ಕಾಗಿ ಹಿಂಸೆಯನ್ನು ಪ್ರತಿಭಟಿಸುವಂತೆ–ನಟಿಸಬೇಕು. ಆದರೆ ಹಿಂಸೆಗೆ ಪ್ರತಿಯಾಗಿ ಹಿಂಸೆ ಮಾಡದಂತೆ ಎಚ್ಚರಿಕೆಯಿಂದಿರಬೇಕು." ಎಂದು ಬೋಧಿಸಿದ. ಅಂದಿನ ಉಪಾಯ ವೇದಾಂತವು ಇಂದಿನ ಕಾಲಕ್ಕು ಮುಂದಿನ ಕಾಲಕ್ಕು ಚೆನ್ನಾಗಿ ಬದುಕು ಬೇಕೆಂಬುವವರಿಗೆಲ್ಲ ದಾರಿದೀಪವಾಗಿದೆ.

ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ,
ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತಿ,
ಇದ್ದರೇನೋ ಶಿವಾ ಶಿವಾ! ಹೋದರೇನೋ?

ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ
ಸುಳಿದು ಸೂಸುವ ವಾಯು ನಿಮ್ಮ ದಾನ! ನಿಮ್ಮ
ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ಹೇಳಾ ರಾಮನಾಥ.

—ಜೇಡರದಾಸಿಮಯ್ಯ



# ಬಸವಣ್ಣನವರ ಬದುಕು ಮತ್ತು ಬೋಧೆ

ಪಂ॥ ಚನ್ನಪ್ಪ ಎರೆಸೀಮೆ

ಕ್ರಿ. ಶ. ೧೧೩೨ನೆಯ ಇಸ್ವಿಯ ವೈಶಾಖ ಶುದ್ಧ ತದಿಗೆ ರೋಹಿಣಿ ನಕ್ಷತ್ರದಲ್ಲಿ ಬಾಗೆವಾಡಿಯ ಮಂಡಿಗೆಯ ಮಾದರಸ ಮತ್ತು ಮಾದಲಾಂಬಿಕೆಯರಿಗೆ ಮಗನಾಗಿ ಬಸವೇಶ್ವರನು ಜನಿಸಿದನು. ಬಸವಣ್ಣನವರು ಬಾಲ್ಯದ ವಿದ್ಯಾಭ್ಯಾಸವು ಬಾಗೇವಾಡಿಯಲ್ಲಿಯೇ ಆಯಿತು. ಮುಂದೆ ಪ್ರೌಢ ವಿದ್ಯಾಭ್ಯಾಸಕ್ಕಾಗಿ, ಮಲಪ್ರಭಾ, ಕೃಷ್ಣಾ ನದಿಗಳ ಸಂಗಮಸ್ಥಾನದ 'ಕಪ್ಪಡಿ ಸಂಗಮ' ಎಂಬಲ್ಲಿದ್ದ ಗುರು ಕುಲಕ್ಕೆ ತೆರಳಿ ಅಲ್ಲಿ ಜಾತವೇದರೆಂಬ ಹೆಸರಿನ ಗುರುಗಳಲ್ಲಿ ವಿದ್ಯಾಭ್ಯಾಸ ಮಾಡಿದರು. ಈ ಜಾತವೇದರಿಗೆ ಈಶಾನ ಗುರುಗಳೆಂದು ಹೆಸರು. ಅರ್ಥಶಾಸ್ತ್ರ, ಗಣಿತ, ಸಮಾಜಶಾಸ್ತ್ರ, ವೇದಾಗಮ ಪುರಾಣಾದಿ ಸಕಲ ವಿದ್ಯೆಗಳಲ್ಲೂ ಬಸವಣ್ಣನವರು ಪಾರಂಗತರಾದರು. ಸುಮಾರು ೨೫ನೆಯ ವಯಸ್ಸಿನವರೆಗೆ ಶ್ರದ್ಧೆಯಿಂದ ವಿದ್ಯಾಭ್ಯಾಸ ಮಾಡಿ ವಿದ್ವಾಂಸರೆನಿಸಿದ ಬಸವಣ್ಣನವರ ಕೀರ್ತಿ ಎಲ್ಲ ಕಡೆಗೂ ಹಬ್ಬಿತು. ಈ ಸಮಯದಲ್ಲಿ ಐಹೊಳೆ, ಪಟ್ಟದಕಲ್ಲುಗಳ 'ವೀರಬಣಂಜು' ಸಂಘವೆಂಬ ವ್ಯಾಪಾರಿ ಸಂಘವು ಭಾರತದಲ್ಲೆಲ್ಲ ಪ್ರಖ್ಯಾತಿ ಪಡೆದ ಸಂಘವೆನಿಸಿತ್ತು. ಇವರು ಭಾರತದ ಸಮಸ್ತ ಭಾಗಗಳಲ್ಲೂ ಸಂಚರಿಸಿ ವ್ಯಾಪಾರ ಮಾಡುತ್ತಿದ್ದರು. ಬಸವಣ್ಣನವರು ಇವರ ಸಹಾಯದಿಂದ ಸಾಮಾನ್ಯವಾಗಿ ಕಾಶ್ಮೀರ ಮೊದಲ್ಗೊಂಡು ತಮಿಳುನಾಡಿನವರೆಗೆ ಸಂಚರಿಸಿ ಭಾರತದ ಸ್ಥಿತಿಗತಿಗಳನ್ನು ಜನತೆಯಲ್ಲಿ ಆವರಿಸಿರುವ ಅನೇಕ ಲೋಪದೋಷಗಳನ್ನೂ ಅರ್ಥಮಾಡಿಕೊಂಡು ಭಾರತೀಯ ಸನಾತನ ಧರ್ಮಕ್ಕೆ ಹಿಡಿದಿದ್ದ ಅಂಧಶ್ರದ್ಧೆಯೆಂಬ ಕೂಪದಿಂದ ಅದನ್ನು ಪಾರು ಮಾಡಲು ದೃಢ ಸಂಕಲ್ಪ ಮಾಡಿಕೊಂಡು ಕಪ್ಪಡಿ ಸಂಗಮಕ್ಕೆ ಹಿಂದಿರುಗಿದರು.

ಉತ್ತರ ಭಾರತವು ಪದೇ ಪದೇ ಪರಕೀಯರ ದಾಳಿಯಿಂದ ಜರ್ಜರಿತವಾಗಿ ಹೋಗಿತ್ತು. ಘಜನಿ ಮಹಮದನು ೧೭ಸಲ ದಂಡೆತ್ತಿ ಬಂದು ಅಪಾರ ಐಶ್ವರ್ಯವನ್ನು ಕೊಳ್ಳೆಹೊಡೆದಿದ್ದನು. ಪರಕೀಯರು ಭಾರತದ ಭೂಮಿಯಲ್ಲಿ ಪದಾರ್ಪಣೆ ಮಾಡಿ ರಾಜ್ಯ ಕಟ್ಟುವ ಹವಣಿಕೆಯಲ್ಲಿದ್ದರು. ದಕ್ಷಿಣ ಭಾರತದಲ್ಲೂ ಕೂಡ ದೊಡ್ಡ ಚಕ್ರಾಧಿಪತ್ಯವು ಅವನತಿಗೆ ಬರಹತ್ತಿತು ಇಲ್ಲಿ ಅನೇಕ ರಾಜ್ಯಗಳು ಹುಟ್ಟಿಕೊಂಡು ಅವೆಲ್ಲ ಐಕ್ಯಮತ್ಯವಿಲ್ಲದೆ ಪರಸ್ಪರ ಯುದ್ಧದಲ್ಲಿಯೇ ತೊಡಗಿದ್ದವು. ಇದರ ಜೊತೆಗೆ ಧರ್ಮ ಧರ್ಮಗಳ ತಿಕ್ಕಾಟವೂ ಉಂಟಾಗಿ ಜನತೆ ಗೊತ್ತು ಗುರಿಯಿಲ್ಲದೆ ಸಾಗುತ್ತಿತ್ತು. ದೇಶವು ಬಡತನದತ್ತ ನಡೆಯುತ್ತಿತ್ತು. ಜನತೆ ಸ್ವಾಭಿಮಾನ ಶೂನ್ಯ-

ದತ್ತ ಅಡಿಯಿಡುತ್ತಿತ್ತು. ಈ ಎಲ್ಲ ಪರಿಸ್ಥಿತಿಗಳೂ ಬಸವಣ್ಣನ ಮೇಲೆ ಮಹತ್ತರ ಪರಿಣಾಮವನ್ನುಂಟು ಮಾಡಿದವು. ಸರ್ವ ಪ್ರಯತ್ನದಿಂದ ಇಂಥ ತಾಳಗೆಟ್ಟು ತೊಳಲುತ್ತಿರುವ ಜನತೆಯಲ್ಲಿ ಜಾಗೃತಾ ಮನೋಭಾವವನ್ನುಂಟು ಮಾಡಬೇಕು: ಕೆಚ್ಚು ನೆಚ್ಚುಗಳಿಂದ ಅವರು ಶೋಭಿಸುವಂತಾಗಬೇಕು. ಹೀಗೆ ಸಮಗ್ರ ಭಾರತೀಯರನ್ನು ಸ್ವಾಭಿಮಾನದಿಂದ ಬೆಳಗುವಂತೆ ಮಾಡಿ ಭಾರತದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ರಂಗದಲ್ಲಿ ನೂತನ ಕ್ರಾಂತಿಯೊಂದನ್ನು ಪ್ರಸಾರ ಮಾಡುವ ಯೋಚನೆಯಲ್ಲಿ ಮತ್ತು ಯೋಜನೆಯಲ್ಲಿ ಬಸವಣ್ಣ ಮುಳುಗಿಹೋದನು. ಇವನು ತನ್ನ ಸುಮಾರು ಇಪ್ಪತ್ತೈದನೆಯ ಪ್ರಾಯದಲ್ಲಿ ಕಲ್ಯಾಣದ ಅರಸರಲ್ಲಿ ಮಂತ್ರಿಯಾಗಿದ್ದ ತನ್ನ ಪೂರ್ವ ಸಂಬಂಧದ ಸಿದ್ಧರಸ ಎಂಬುವನ ಮಗಳಾದ ನೀಲಲೋಚನೆಯನ್ನೂ ಸೋದರ ಮಾವನಾದ ಬಲದೇವ ಮಂತ್ರಿ ಮಗಳು ಗಂಗಾಬಿಕೆಯನ್ನೂ ಲಗ್ನವಾಗಿ ಗೃಹಸ್ಥಾಶ್ರಮ ಸ್ವೀಕರಿಸಿ, ಕಲ್ಯಾಣದಲ್ಲಿಯೇ ವಾಸಿಸತೊಡಗಿದನು.

ಆಗ ಕಲ್ಯಾಣವು ಚಾಲುಕ್ಯ ಚಕ್ರವರ್ತಿಗಳ ಕೈತಪ್ಪಿ ಕಲಚೂರ್ಯ ವಂಶದ ಬಿಜ್ಜಳ ಎಂಬ ಚಾಲುಕ್ಯರ ಸಾಮಂತನೇ ಆಗಿದ್ದ ಅರಸನ ಸ್ವಾಧೀನಕ್ಕೆ ಬಂದಿತು. ಬಿಜ್ಜಳನು ಬಸವಣ್ಣನ ಅಸಾಧಾರಣ ಗಣಿತ ಶಾಸ್ತ್ರ, ಪಾಂಡಿತ್ಯಕ್ಕೂ, ಪ್ರತಿಭೆಗೂ, ಸತ್ಯಶುದ್ಧ ನಡವಳಿಕೆಗೂ ಮಾರು ಹೋಗಿದ್ದನು. ಅಂತೆಯೇ ಬಸವಣ್ಣನಿಗೆ ಬಿಜ್ಜಳ ದೊರೆ ಕರಣಿಕ ವೃತ್ತಿಯಲ್ಲಿ ಸ್ಥಾನ ಕೊಟ್ಟನು. ಬಸವಣ್ಣ ತನ್ನ ವೃತ್ತಿಯಲ್ಲಿ ತೋರಿದ ಕರ್ತವ್ಯನಿಷ್ಠೆ, ಪ್ರತಿಭೆ, ಕಾರ್ಯಕೌಶಲ, ಸತ್ಯಸಂಧತೆ ಸ್ವಾಮಿಭೃತ್ಯಸಂಬಂಧವೇ ಮೊದಲಾದ ಉದಾತ್ತ ಗುಣಗಳಿಂದ ಮುಂದೆ ಮಂತ್ರಿ ಸ್ಥಾನವನ್ನು ಪಡೆದನು.

ಬಸವಣ್ಣನು ಸಾಮಾನ್ಯ ಜನತೆಯಲ್ಲಿ ಧರ್ಮತತ್ತ್ವಗಳನ್ನೂ, ಸಾಮಾಜಿಕ ನಡೆನುಡಿಗಳನ್ನೂ ಪ್ರಸಾರ ಮಾಡಲು, ಸಂಸ್ಕೃತಕ್ಕಿಂತ ಜನರ ಆಡುನುಡಿಯಾದ ಕನ್ನಡವೇ ಅತ್ಯುತ್ತಮ ಭಾಷೆಯೆಂದು ಭಾವಿಸಿ, ಕನ್ನಡದಲ್ಲಿಯೇ ತನ್ನ ಯೋಜನಾಬದ್ಧ ಅಭಿಪ್ರಾಯಗಳನ್ನು ವಚನ ರೂಪವಾಗಿ ರಚಿಸಿ ಜನತೆಯಲ್ಲಿ ಧಾರ್ಮಿಕ, ಸಾಮಾಜಿಕ ತತ್ವಗಳನ್ನು ಪ್ರಸಾರ ಮಾಡಹತ್ತಿದನು. ಬಸವಣ್ಣನ ಈ ಹೊಸ ಅಭಿಪ್ರಾಯಗಳನ್ನೊಳಗೊಂಡ ವಿಚಾರಗಳು ಭಾರತದ ಮೂಲೆ ಮೂಲೆಗಳಲ್ಲಿ ಪ್ರಸಾರಗೊಂಡು ಕಾಶ್ಮೀರ ಮೊದಲ್ಗೊಂಡು ಕನ್ಯಾಕುಮಾರಿಯವರೆಗೆ ಅನೇಕ ಜನರ ಗಮನ ಸೆಳೆದು ಕಲ್ಯಾಣಕ್ಕೆ ಆಗಮಿಸಿದರು. ಹೀಗಾಗಿ ಕಲ್ಯಾಣನಗರವೇ ಒಂದು ಪುಟ್ಟ ಭಾರತವಾಗಿ ಪರಿಣಮಿಸಿತು. ಸುಮಾರು ೭೭೦ ಜನರುಳ್ಳ ಒಂದು ಅಖಿಲ ಭಾರತ ಮಟ್ಟದ 'ಶಿವಾನುಭವ ಮಂಟಪ' ವೆಂಬ ಒಂದು ಹೊಸ ಸಂಸ್ಥೆಯನ್ನು ಕಲ್ಯಾಣದಲ್ಲಿ ಕಟ್ಟಿದರು. ಬಳ್ಳಿಗಾವೆಯ ಪ್ರಭುದೇವರು ಆ ಸಂಸ್ಥೆಯ ಅಧ್ಯಕ್ಷರು. ಅವರು ಮಹಾ ವಿದ್ವಾಂಸರೂ ಮಹಿಮಾಶಾಲಿಗಳೂ ಆಗಿದ್ದರು. ಈ ಎಲ್ಲ ಪ್ರತಿನಿಧಿಗಳು ಮುಂದಿನ ಭಾರತದ ಉದ್ಧಾರಕ್ಕೆ



ಯಾವ ಯೋಜನೆ ಹಾಕಬೇಕು? ಯಾವ ಮಾರ್ಗದಲ್ಲಿ ಜನತೆಯ ಜೀವನ ಮಟ್ಟವನ್ನು ಮೇಲಕೆತ್ತಬೇಕು? ಎಂಬ ಬಗೆಗೆ ತೂಗಿ ನೋಡಿ ವಿಚಾರ ಮಾಡಿ ಅನೇಕ ತತ್ವಗಳನ್ನು ಹೊರಗೆಡಹಿದರು. ಇವರೆಲ್ಲರ ವಿಚಾರಗಳು ವಚನಗಳ ರೂಪದಲ್ಲಿ ಇಂದಿಗೂ ಪ್ರಚಾರದಲ್ಲಿವೆ. ವಚನ ರಚನೆ ಮಾಡಿದವರೆಲ್ಲ ಬಸವಣ್ಣ, ಬಳ್ಳಿಗಾವೆಯ ಅಲ್ಲಮಪ್ರಭುದೇವರು, ಉಡುತಡಿಯ ಅಕ್ಕಮಹಾದೇವಿ' ಸೊಲ್ಲಾಪುರದ ಸಿದ್ಧರಾಮೇಶ್ವರ, ಕಾಶ್ಮೀರದ ಮೋಳಿಗೆಯ ಮಾರಯ್ಯ ಮತ್ತು ಅವನ ಹೆಂಡತಿ ಮಹಾದೇವಿಯಮ್ಮ, ಕಾಠೇವಾಡದ ಆದಯ್ಯಾ, ಬನಾರಸದ ಶಿವಲೋಕ ಮಂಚಣ್ಣ, ಮಹಾರಾಷ್ಟ್ರದ ಉರಿಲಿಂಗದೇವ ; ಆಂಧ್ರದ ಕಲ್ಲುಕುರಿಕೆಯ ಸಕಲೇಶಮಾದರಸ, ಉರಿಲಿಂಗಪೆದ್ದಿ ಮುಂತಾದವರು ಮುಖ್ಯರಾದರೂ ಇನ್ನೂ ಅನೇಕ ಜನ ಭಾರತದ ವಿವಿಧ ಭಾಗಗಳ ಜನರಿದ್ದಾರೆ ಇವರೆಲ್ಲರೂ ಕನ್ನಡದಲ್ಲಿಯೇ ವಚನಗಳನ್ನು ರಚಿಸಿದ್ದಾರೆ.

ಮೇಲೆ ತಿಳಿಸಿದ ೭೭೦ ಜನರೆಲ್ಲರೂ ಬಸವಣ್ಣನ ಕ್ರಾಂತಿಕಾರಕ ಮಾರು ಹೋಗಿ ಅವನ ಆದೇಶದಂತೆ ಕಾರ್ಯರಂಗಕ್ಕೆ ಧುಮುಕಿದ ಮಹಾವಿಚಾರವಾದಿಗಳ; ಸತ್ಯಶುದ್ಧ ನಡುವಳಿಕೆಯುಳ್ಳವರು; ಅಖಂಡ ಭಾರತದ ಮೇಲ್ಮೆಗೆ ಹೆಣಗಿದವರು. ಭಾರತದ ಜನತೆಯನ್ನು ಮೇಲಕೆತ್ತಲು ಪ್ರಯತ್ನಿಸಿದ ಮಹಾ ಮಹಾಂತರು. ಇವರೆಲ್ಲರೂ ಬಸವಣ್ಣನವರ ಯೋಚನೆ, ಯೋಚನೆಗಳಂತೆ ಕಾರ್ಯ ಮಾಡಿದರು.

ಬಸವಣ್ಣನವರು ಲೋಕಕ್ಕೆ ಬೋಧಿಸಿದ ಬೋಧೆಗಳು ಬಹು ಘನವಾದವು. ಪರಮಾತ್ಮನ ಲೀಲೆಯಿಂದ ಕಣ್ಣಿಗೆ ಕಾಣುವ ಈ ಜಗತ್ತಿನಲ್ಲಿ ಬಾಳಲು ಎಲ್ಲರಿಗೂ ಹಕ್ಕಿದೆ. ಈ ಜಗತ್ತು, ನೀರು ಗಾಳಿ, ಅನ್ನ ಎಲ್ಲವೂ ಪರಮಾತ್ಮನದಾನ. ಆತನ ಬಗೆಗೆ ನಮಗೆ ಅತ್ಯಂತ ಭಕ್ತಿ ಬೇಕು. ಈ ಸೃಷ್ಟಿಯೆಂಬುದು ಆ ಪರಮಾತ್ಮನ ಟಂಕಸಾಲೆಯೇ ಆಗಿದೆ. ನಾವೆಲ್ಲ ನಾಣ್ಯಗಳು, ನಾಣ್ಯಗಳ ಎರಡು ಮುಖ ಶುದ್ಧವಾಗಿ ಅಚ್ಚೊತ್ತಿದ್ದರೆ ಮಾತ್ರ ವ್ಯವಹಾರಕ್ಕೆ ಯೋಗ್ಯವಾಗುವ ಹಾಗೆ ನಾವು ಮನಸ್ಸಿನಿಂದ ಪರಿಶುದ್ಧವಾಗಿ ವ್ಯವಹಾರದಲ್ಲೂ ಪರಿಶುದ್ಧರಾಗಿ ಬಾಳಬೇಕು. ಕಳ್ಳನಾಣ್ಯ ಕೋಟೆ. ನಾಣ್ಯ ವ್ಯವಹಾರಕ್ಕೆ ಸಲ್ಲುವುದಿಲ್ಲ. ಈ ದೇಹವೆಂಬುದು ನಶ್ವರ, ಮೂರು ದಿನದ ಸಂತೆ ಎನ್ನುತ್ತ ದೇಹದ ಬಗೆಗೆ ಅನಾದರಣೆ ಯೋಗ್ಯವಲ, ಇದು ಪರಮಾತ್ಮನನ್ನು ಒಲಿಸುವುದಕ್ಕೆ ನಮಗೆ ಪರಮಾತ್ಮನಿಂದಲೇ ಕೊಡಲ್ಪಟ್ಟ ಪ್ರಸಾದಕಾಯ. ಈ ದೇಹವನ್ನು ಧರಿಸಿಯೇ ನಾವು ಸಾಧಿಸಬೇಕಾದುದನ್ನು ಸಾಧಿಸಿ ಪರಮಾತ್ಮನ ಕೃಪೆಗೆ ಪಾತ್ರರಾಗುವ ಹಾಗೆ ಈ ಪ್ರಪಂಚದಲ್ಲಿ ನಡೆದರೆ ಅವನ ಕೃಪೆಗೇ ಪಾತ್ರರಾಗುತ್ತೇವೆ. ಹುಟ್ಟಿದುದಕ್ಕೂ ಸಾರ್ಥಕವಾಗುತ್ತದೆ. ಈ ದೇಹವು ಪರಮೇಶ್ವರನು ಆವಾಸ ಮಾಡುವುದಕ್ಕೆ ಯೋಗ್ಯವಾಗಿರುವಂತೆ ಮನಸ್ಸಿನಲ್ಲಿರುವ ಕೊಳೆ, ಬುದ್ಧಿಯಲ್ಲಿರುವ ಕೊಳೆಗಳನ್ನೆಲ್ಲ ತೆಗೆಯಬೇಕು. ಅಲ್ಲಿ ಗುಡಿಸಿ ಆ ಎಲ್ಲ ಕೊಳೆ ತೆಗೆದು ರಂಗವಲ್ಲಿಯನ್ನಿಕ್ಕಿ

ಗುಡಿತೋರಣ ಕಟ್ಟಿದರೆ ಈಶ್ವರ ನಮ್ಮಲ್ಲಿ ಬಂದು ಅಡಿಯಿಟ್ಟಾನು. ದೇವರಿಗಾಗಿ ಬೇರೆ ಗುಡಿ ಕಟ್ಟಲೇ ಬೇಕಾಗಿಲ್ಲ. ನಮ್ಮ ದೇಹದ ಕಾಲುಗಳೇ ಕಂಬವಾಗಬೇಕು, ಶಿರವೇ ಬಂಗಾರದ ಕಳಶವಾಗಬೇಕು. ಪ್ರಪಂಚವನ್ನೆಲ್ಲಾ ವ್ಯಾಪಿಸಿರುವ ಪರಮಾತ್ಮನಿಗೆ ಗುಡಿ ಕಟ್ಟಿ ಅಲ್ಲಿ ಒಂದು ವಿಗ್ರಹವಿಟ್ಟು ಪೂಜಿಸಿ ಅವನ ಕೃಪೆ ಪಡೆಯುವುದಕ್ಕಿಂತ ನಮ್ಮ ದೇಹದಲ್ಲಿಯೇ ಅವನಿಗೆ ಇಂಬು ಕೊಡಬೇಕು. ನಾವು ಪರಿಶುದ್ಧರಾಗದ ವಿನಾ ಅವನು ನಮ್ಮಲ್ಲಿ ಪ್ರವೇಶಿಸಲಾರನು. ಕೊಳೆಗೂ ಪರಮಾತ್ಮನಿಗೂ ಬಲು ದೂರ.

ಈ ಜಗತ್ತಿಗೆ ಪರಮಾತ್ಮನೊಬ್ಬನೇ. ಅವನಿಗೆ ಹಲವು ಹೆಸರುಗಳಿರಬಹುದು. ನೂರಾರು ದೇವರುಗಳು ಪೂಜೆ, ನೈವೇದ್ಯ, ಪತ್ರೆಪುಷ್ಪ, ಮಜ್ಜನ ಇಷ್ಟರಿಂದಲೇ ಅವನು ತೃಪ್ತನಾಗಲಾರನು. ಅವನು ತೃಪ್ತಿಯನ್ನು ಹೊಂದಲು ನಮ್ಮ ಹೃದಯವನ್ನೇ ಅವನಿಗೆ ಅರ್ಪಿಸಬೇಕು. ಪ್ರಾಣಿಗಳನ್ನು ಬಲಿಕೊಟ್ಟು ದೇವರ ಒಲುಮೆ ಪಡೆಯಲು ಪ್ರಯತ್ನಿಸುತ್ತಾರೆ. ಇದಂತೂ ಅತೀವ ಮೌಢ್ಯದ ಪರಮಾವಧಿ. ಸ್ವರ್ಗಲೋಕವೆಂಬುದು ಬೇರೆ ಎಲ್ಲೂ ಇಲ್ಲ, ನಾವು ಮಾರ್ಪಡಿಸಿಕೊಳ್ಳಬೇಕು. ಸತ್ಯದ ನಡೆ ನುಡಿಗಳಿಂದ ನಮ್ಮ ಸುತ್ತ ಮುತ್ತಣ ಪ್ರಪಂಚವೇ ಸ್ವರ್ಗವಾಗುತ್ತದೆ. „ಸತ್ಯವ ನುಡಿವುದೇ ಸ್ವರ್ಗ, ಮಿಥ್ಯವ ನುಡಿವುದೇ ನರಕ", "ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ" ಹೀಗೆ ಸತ್ಯ ಆಚಾರ, ಮೃದು ನುಡಿ-ಇವೇ ಸ್ವರ್ಗಪ್ರಾಯವಾದುವು. ಸತ್ತ ಮೇಲೆ ಸಿಗಬಹುದಾದ ಯಾವುದೇ ಕನಸಿನ ಸ್ವರ್ಗವನ್ನು ಅಲ್ಲಗಳೆದು ಜೀವಂತವಾಗಲೇ ನಮ್ಮ ನಡೆ-ನುಡಿಗಳಿಂದ ನಾವು ವಾಸಿಸುವ ಈ ಪ್ರಪಂಚವನ್ನು ಸ್ವರ್ಗವನ್ನಾಗಿಸಿಕೊಳ್ಳಬೇಕೆಂದು ಹೇಳುವ ಮಾತುಗಳು ಅತ್ಯಧಿಕ ಬೆಲೆಯುಳ್ಳವು.

ನೆಮ್ಮದಿಯಿಂದ ಬಾಳಬೇಕಾದರೆ, ನಮ್ಮ ಮನಸ್ಸನ್ನು ಸಂತೈಸಿಕೊಳ್ಳಬೇಕು. ಇನ್ನೊಬ್ಬರಿಗೆ ಬೋಧೆ ಮಾಡುವ ಮೊದಲು ನಾವು ಶುದ್ಧವಾಗಿದ್ದರೆ, ನಮ್ಮನ್ನು ನೋಡಿಯೇ ಲೋಕ ಕಲಿಯುತ್ತದೆ, ಸದುವಿನಯ, ಮೃದುನುಡಿಗಳಿಂದ ಮೂರು ಲೋಕ ಗೆಲ್ಲಬಹುದು. ನಾಲಿಗೆ ಇದೆಯೆಂದು ಮನಸ್ವೀ ಹರಟಬಾರದು, ಮಾತಿನಲ್ಲಿ ಎಚ್ಚರ ತಪ್ಪಬಾರದು. ಮನೆಗೆ ಯಾರಾದರೂ ಬಂದರೆ ಅವರಿಗೆ ಏನನ್ನೂ ಕೊಡಲು ಶಕ್ತಿ ಇಲ್ಲದಿರಬಹುದು. ಒಳ್ಳೆಯ ಮಾತುಗಳಿಂದ ಉಪಚರಿಸಲೂ ನಮ್ಮ ನಾಲಗೆಯನ್ನು ಉಪಯೋಗಿಸಕೊಳ್ಳದಿದ್ದರೆ ಹೇಗೆ? ಪುಣ್ಯ ಪಾಪಗಳು ನಮ್ಮ ಇಷ್ಟಗಳೇ ಆಗಿವೆ. ಸದ್ವ್ಯವಹಾರದಿಂದ ಪುಣ್ಯ ಗಳಿಸಿಕೊಂಡು ಲೋಕದಲ್ಲಿ ಎಲ್ಲರ ಸ್ತುತಿಗೂ ಪಾತ್ರರಾಗಬಹುದು. ದುರ್ವ್ಯವಹಾರದಿಂದ ಪಾಪ ತಂದುಕೊಂಡು ನಿಂದೆಗೆ ಒಳಗಾಗಬಹುದು. ಹೀಗೆ ವ್ಯಕ್ತಿಗತವಾದ ಶುದ್ಧಿಯನ್ನು ಪಡೆದು ತನ್ನ ಮನೆಯ ಶುದ್ಧಿ, ಊರಿನ, ನಾಡಿನ ಶುದ್ಧಿಯನ್ನು ಪ್ರತಿಯೊಬ್ಬನೊಡನೆ ಆತ್ಮೀಯ ವಿಶ್ವಾಸ ಬೆಳೆಸಬೇಕು ಎಂಬುದಕ್ಕೆ ಅವರು ಈ ಕೆಳಗಿನ ಬಹು ಬೆಲೆಯುಳ್ಳ ವಚನ ಹೇಳಿದ್ದಾರೆ:



ಇವನಾರವ ? ಇವನಾರವ ? ಇವನಾರವ
ಎಂದೆನಿಸದಿರಯ್ಯ
ಇವ ನಮ್ಮವ, ಇವ ನಮ್ಮವ, ಇವ
ನಮ್ಮವನೆಂದೆನಿಸಯ್ಯ
ಕೂಡಲಸಂಗಮದೇವ ನಿಮ್ಮ ಮನೆಯ
ಮಗನೆಂದೆನಿಸಯ್ಯ.

ಎಲ್ಲರೂ ಪರಮಾತ್ಮನ ಮಕ್ಕಳೇ ಆಗಿರುವಾಗ ಇವನು ಯಾರವನು? ಎಂಬ ಪ್ರಶ್ನೆಯೇ ಏಳುವುದಿಲ್ಲ. ಆದ್ದರಿಂದ ಎಲ್ಲರೂ ನಮ್ಮವರೆಂಬ ಭಾವನೆ ಬೆಳೆಯಿಸಿ ಪ್ರೀತಿ ವಿಶ್ವಾಸಗಳಿಂದ ನಡೆದುಕೊಳ್ಳಬೇಕೆಂದು ಬೋಧಿಸಿದ್ದಾರೆ. ಒಟ್ಟಿನಲ್ಲಿ ಬಸವಣ್ಣನವರು ಲೋಕಕ್ಕೆ ಸಾರಿದ ಸಂದೇಶಗಳನ್ನು ಈ ಕೆಳಗಿನಂತೆ ಕ್ರೋಢೀಕರಿಸಿ ಹೇಳಬಹುದಾಗಿದೆ:

೧) ಪ್ರತಿ ವ್ಯಕ್ತಿಯೂ ರಾಷ್ಟ್ರಹಿತಕ್ಕೆ ತನ್ನ ತನ್ನ ಕರ್ತವ್ಯಗಳನ್ನು ಕೀಳು ಮೇಲೆನ್ನದೆ ಮಾಡಿ ನ್ಯಾಯವಾಗಿ ಸಂಪಾದಿಸಿ, ತಾನೂ ಸುಖ ಪಡಬೇಕು, ಕಿಂಚಿತ್ ಭಾಗವನ್ನು ಕೂಡಿಟ್ಟು ಲೋಕಜೀವನಕ್ಕೆ ವಿನಿಯೋಗಿಸಬೇಕು. ಸೋಮಾರಿಗಳು ರಾಷ್ಟ್ರ ಸಂಪದಭಿವೃದ್ಧಿಗೆ ವೈರಿಗಳು, ಕರ್ತವ್ಯದಲ್ಲಿ ಪ್ರೀತಿಯಿಲ್ಲದ ಜನ ಜಂಗಳಿಯಿಂದ ರಾಷ್ಟ್ರದ ಶಕ್ತಿ ನಷ್ಟವಾಗಿ ಆರ್ಥಿಕವಾಗಿ ರಾಷ್ಟ್ರ ಬಡವಾಗುವುದು.

೨) ಬೀದಿಯಲ್ಲಿ ಕಸ ಗುಡಿಸುವ ಕೆಲಸವೇ ಆಗಲಿ, ಸಿಂಹಾಸನದ ಮೇಲೆ ಕುಳಿತು ರಾಜ್ಯಭಾರ ಮಾಡುವುದೇ ಆಗಲಿ, ಈ ತನ್ನ ಪಾಲಿನ ಕೆಲಸವನ್ನು ದೇವರ ಪೂಜೆಯಂತೆ ಶ್ರದ್ಧಾ-ಭಕ್ತಿ-ವಿಶ್ವಾಸಗಳಿಂದ ಮಾಡಬೇಕು. ದೇವರಪೂಜೆ ಮರೆತರೂ ಸೈರಿಬಹುದು. ಕರ್ತವ್ಯವನ್ನು ಮರೆತರೆ ಸೈರಿಸಲಾಗದು.

೩) ದೇಶದಲ್ಲಿ ಭಿಕ್ಷುಕರಿರಬಾರದು. ಅದು ದೇಶಕ್ಕೆ ಒಂದು ಅಭಿಶಾಪ ; ರಾಷ್ಟ್ರದ ದೌರ್ಬಲ್ಯ. ಆದ್ದರಿಂದ ತಾನು ಮಾಡುವ ಕಾಯಕದಿಂದ ಬಂದ ಕಾರೆಯ ಸೊಪ್ಪಾದರೂ ಚಿಂತೆಯಿಲ್ಲ, ತೃಪ್ತಿಯಿಂದ ಆ ಫಲವನ್ನು ಪ್ರಸಾದರೂಪವಾಗಿ ಉಣ್ಣಬೇಕು. ಯಾರನ್ನೂ ಏನನ್ನೂ ಬೇಡಬಾರದು, ಶಿವನೇ ಬಂದು ಏನನ್ನಾದರೂ ಕೊಡಲು ಬಂದರೆ ಸ್ವೀಕರಿಸಬಾರದು. ಏಕೆಂದರೆ ಅದು ಕಾಯಕ ಮಾಡಿ ಬಂದ ಪ್ರತಿಫಲವಲ್ಲ.

೪) ಸಮಾಜದಲ್ಲಿ ಪ್ರತಿಯೊಂದು ಕಸಬಿನವರೊಡನೆ ಸಹಕಾರದಿಂದ ಜೀವಿಸಬೇಕು. ಕಾಯಕದ ಮೇಲಿಂದ ಮನುಷ್ಯನ ಯೋಗ್ಯತೆಯನ್ನು ನಿಷ್ಕರ್ಷೆ ಮಾಡಿ ಮೇಲು ಕೀಳುಗಳನ್ನೆಣಿಸಬಾರದು. ಈಶ್ವರನ ಪ್ರೀತಿಗೆ ಪಾತ್ರನಾದ ಭಕ್ತನು ಎಲ್ಲಿ ಹುಟ್ಟಿದರೂ ಶ್ರೇಷ್ಠನು.

೫) ಲೋಕದ ಜನರಲ್ಲಿ ಶಿವನ ಭಕ್ತಿಯಲ್ಲಿ ಜೀವಿಸುವ ಸಾತ್ವಿಕ ಜೀವಿಯೊಂದು ಜಾತಿ. ಅದಿಲ್ಲದವರೊಂದು ಜಾತಿಮತಗಳ ಗೊಂದಲವೇ ಇಲ್ಲ. ಐಶ್ವರ್ಯ, ವಿದ್ಯೆ' ಸಂಸ್ಕಾರವಿದ್ದವರೇ ಮೇಲು, ಉಳಿದವರು ಕೀಳೆಂಬ ಭಾವನೆ ಯೋಗ್ಯವಲ್ಲ. ಪರ-ಹಿಂಸೆಯನ್ನು ಮಾಡುವವನೇ ಮಾದಿಗ; ಹೊಲಸು ತಿನ್ನುವವನೇ ಹೊಲೆಯ. ಒಟ್ಟಿ-ನಲ್ಲಿ ಸಕಲ ಜೀವರುಗಳಿಗೆಲ್ಲಾ ಒಳ್ಳೆಯದಾಗಲಿ ಎಂಬ ಭಾವನೆಯಿಂದ ಈ ಲೋಕ-ದಲ್ಲಿ ನಡೆಯುವನೇ ಉತ್ತಮ ಕುಲದವನು.

೬) ಹಣವನ್ನು ನೆಲದಲ್ಲಿ ಹೂಳಿಡುವುದಾಗಲಿ ಜನಜೀವನಕ್ಕೆ ಬೇಕಾಗುವ ವಸ್ತುಗಳನ್ನು ಲೋಭದಿಂದ ಒಬ್ಬನೇ ಕೂಡಿಟ್ಟುಕೊಳ್ಳುವುದಾಗಲಿ ಸಲ್ಲದು. ಅದರಿಂದ ರಾಷ್ಟ್ರಕ್ಕೆ ದೊಡ್ಡ ಹಾನಿ. ಜನಜೀವನ ಅಸ್ತವ್ಯಸ್ತಗೊಳ್ಳುವುದು. ಏಕೆಂದರೆ ಎಲ್ಲ ವಸ್ತುಗಳೂ ಶಿವನಿಂದಲೇ ಲಭ್ಯವಾಗಿ ಅವನ ಸಮಸ್ತ ಜೀವರಾಶಿಗಳಿಗೆ ಉಪಯೋ-ಗವಾಗಬೇಕಾದುವು. ಎಲ್ಲವೂ ಪರಮಾತ್ಮನ ಕೃಪೆ. ಆದ್ದರಿಂದ ಇದ್ದವರು ಇಲ್ಲದವರಿಗೆ ಹಂಚಬೇಕು. ಇಲ್ಲದವರು ದುಡಿದು ಸಂಪಾದಿಸಿ ಜೀವನ ಮಾಡಬೇಕು.

೭) ದೇವರ ಪೂಜೆಯನ್ನು ಮಾಡಿ ಅತನ ಕೃಪೆ ಪಡೆಯಲು ವೇದಗಳನ್ನೇ ಓದಿ ಪಾಂಡಿತ್ಯ ಸಂಪಾದಿಸಬೇಕಿಲ್ಲ. ಏಕೆಂದರೆ ದೇವರು ವೇದಪ್ರಿಯನಷ್ಟೇ ಅಲ್ಲ, ದೇವನ ಒಲುಮೆಗೆ ಜಾತಿ, ಮತ, ಕುಲ, ಬಲ, ಛಲ, ಓದು ಇವಾವುವೂ ಅಡ್ಡ ಬರುವುದಿಲ್ಲ. ಪರಮೇಶ್ವರನು ಭಕ್ತಿ ಪ್ರಿಯ, ಭಕ್ತಿ ಜೀವನವೆಂದರೆ ನಡೆವಳಿಕೆ, ನುಡಿಯುವಿಕೆ, ಸುಖಪಡುವಿಕೆ, ಕರ್ತವ್ಯ ಮಾಡುವಿಕೆ, ನೋಡುವಿಕೆ, ದೇವಪೂಜೆ ಮಾಡುವಿಕೆ, ಕೊನೆಗೆ ದೇಹ ಬಿಡುವಿಕೆ-ಈ ಎಲ್ಲ ಕೆಲಸಗಳಲ್ಲಿ ಶುದ್ಧವಾಗಿ ವ್ಯವಹಾರ ಮಾಡುವುದೇ ಭಕ್ತಿಜೀವನ. ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಅಹಂಕಾರವಾಗಲಿ, ಕೀಳು-ಕುಲದಲ್ಲಿ ಹುಟ್ಟಿದೆನೆಂಬ ಸಂಕೋಚವಾಗಲಿ ಸಲ್ಲದು.

೮) ದಯಾದಾಕ್ಷಿಣ್ಯಪರನಾಗಿ ಅನ್ಯಾಯಕ್ಕೆ ಎಂದೂ ಮನಸ್ಸನ್ನು ಮಾರಿಕೊಳ್ಳಬಾರದು ನಿಷ್ಠುರವಾಗಿ ಅನ್ಯಾಯವನ್ನು ಎತ್ತಿ ಹಿಡಿಯಬೇಕು. ಈ ಸಂದರ್ಭದಲ್ಲಿ ಎಷ್ಟೇ ಕೋಪತಾಪಗಳು ಜನರಿಂದ ಉಂಟಾಗಬಹುದು. ಅದಾವುದಕ್ಕೂ ಹೆದರದೆ ಮುನ್ನಡೆಯಬೇಕು. ಈ ಸಂದರ್ಭದಲ್ಲಿ ಮರಣವೇ ಪ್ರಾಪ್ತಿಯಾಗುವುದಾದರೂ ಅದನ್ನು ಸಂತೋಷದಿಂದ ಅಪ್ಪಬೇಕು. ಕಾಯದ ಕಳವಳಕ್ಕೆ ಅಂಜಿ ಕಾಯಯ್ಯ ಎಂದಾಗಲಿ, ಜೀವನೋಪಾಯಕ್ಕಾಗಿ ಈಯಯ್ಯ ಎಂದೆನ್ನಬಾರದು. ಉರಿಬಂದರೂ, ಸಿರಿಬಂದರೂ ಬೇಡ-ಬೇಕು ಎನ್ನದ ಹಾಗೆ ಜೀವನವನ್ನು ಧೈರ್ಯವಾಗಿ ರೂಪಿಸಿಕೊಳ್ಳಬೇಕು. ಅಂಜಿ ಅಳುಕಿ ನಡೆಯಬಾರದು. ಸತ್ಯವನ್ನು ಎತ್ತಿ ಹಿಡಿಯುವವನು ಆನೆಯ ಮೇಲೆ ಏರಿ-ಹೋದ ಹಾಗೆ- ಅಸತ್ಯದ ನಾಯಿಗಳು ಬೊಗಳಿದರೆ ಏನಾಗಬೇಕು? ಅದಕ್ಕೆ ಅಂಜಿ ಲೋಕಕ್ಕೆ ನ್ಯಾಯ ಸಿಗುವುದು ಹೇಗೆ?



ಬಸವಣ್ಣನವರು ಲೋಕಕ್ಕೆ ಕೊಟ್ಟ ಸಂದೇಶಗಳೆಲ್ಲವನ್ನು ವಿಚಾರಿಸಿದರೆ, ಅವ-ರೊಬ್ಬ ಉನ್ನತಮಟ್ಟದ ಆದರ್ಶವಾದಿಗಳಾಗಿ ಗೋಚರಿಸುತ್ತಾರೆ. ಅವರ ಜೀವನವೆಲ್ಲಾ ವ್ಯಕ್ತಿ-ಸಮಾಜ, ರಾಷ್ಟ್ರ-ರಾಷ್ಟ್ರ ಪ್ರೇಮದ ಗಾಢವಾದ ನಡೆಯಲ್ಲಿ ಮುಳುಗಿರುದು ಗೋಚರವಾಗುವುದು. ಲೋಕದ ಹಿತವೇ ತನ್ನ ಹಿತ; ತನ್ನ ಹಿತವೇ ಲೋಕದ ಹಿತ ಎಂಬ ಭಾವನೆಯಿಂದ ನಡೆಯುವವನೇ ದೇವರ ಪ್ರೀತಿಗೆ ಪಾತ್ರನಾಗುವವನು ಎಂಬ ದಿವ್ಯ ಸಂದೇಶವು ಅವರ ವಚನಗಳನ್ನೋದುವವರಿಗೆ ತಿಳಿದುಬರುವುದು. ಬಸವಣ್ಣನ ವಿಚಾರವಾಗಿ ಕನ್ನಡ, ತಮಿಳು, ತೆಲುಗು, ಸಂಸ್ಕೃತ, ಮರಾಠಿ ಭಾಷೆಗಳಲ್ಲಿ ಅನೇಕ ಗ್ರಂಥಗಳು ಆ ಕಾಲದಲ್ಲಿಯೇ ಹುಟ್ಟಿವೆ.

ಬಸವಣ್ಣನವರು ತಮ್ಮ ಕ್ರಾಂತಿ ಕ್ಷೇತ್ರದಲ್ಲಿ ಕಾರ್ಯ ಮಾಡಿದ ಕಾಲ ಕೇವಲ ೧೦-೧೨ ವರ್ಷಗಳು ಮಾತ್ರ ಕ್ರಿ. ಶ. ೧೧೩೨ರಲ್ಲಿ ಜನ್ಮಧಾರಣೆ ಮಾಡಿ ಸುಮಾರು ೧೧೫೬ರ ಹೊತ್ತಿಗೆ ಕಲ್ಯಾಣದಲ್ಲಿ ಬಿಜ್ಜಳನ ಆಸ್ಥಾನಕ್ಕೆ ಸೇರಿ ಕ್ರಿ.ಶ.೧೧೬೮ರ ಹೊತ್ತಿಗೆ ಮರಣ ಹೊಂದಿದರು. ಇಷ್ಟು ಅಲ್ಪ ಕಾಲದಲ್ಲಿ ಅವರು ಮಾಡಿದ ಅದ್ಭುತ ಕ್ರಾಂತಿ ಸೂರ್ಯಚಂದ್ರರಿರುವವರೆಗೂ ಇರುವಷ್ಟು ಸತ್ವಭರಿತವಾಗಿದೆ. ಬಸವಣ್ಣನವರು ಕನ್ನಡ ಜನತೆಯನ್ನು ಅಂಧಕೂಪದಿಂದ ಮೇಲೆತ್ತಿದ ಮಹಾನುಭಾವರು. ಅವರ ವಿಚಾರಧಾರೆಗಳು ಎಲ್ಲ ಕಾಲಕ್ಕೂ ಅನುಕೂಲ್ಯ ತರುವಂಥವುಗಳು. ಪ್ರಪಂಚದಮಹಾ ಕ್ರಾಂತಿಕಾರರಾದ ಸ್ಟಾಲಿನ್, ಕಾರ್ಲ್‌ಮಾರ್ಕ್ಸ್, ಲೆನಿನ್ ಮೊದಲಾದ ಮಹಾ-ಪುರುಷರಿಗೆ ಬಸವಣ್ಣನ ವಿಚಾರ ಧಾರೆಗಳು ಗೊತ್ತಾಗಿದ್ದರೆ ಅದನ್ನು ಅವರು ತಲೆಯ ಮೇಲೆ ಹೊತ್ತು ಮೆರೆಯುತ್ತಿದ್ದರು. ಇಂದಿನ ಬೆಳೆದು ಬಂದ ಸಮಾಜವಾದದ ಕಾಲದಲ್ಲೂ ಬಸವಣ್ಣನವರ ಅಭಿಪ್ರಾಯಗಳನ್ನೆಲ್ಲ ಕಾರ್ಯ ರೂಪಕ್ಕೆ ತರಲು ಶಕ್ಯವಾಗಿಲ್ಲ.

# ಮಾರ್ಕಂಡೇಯ

—ಪ. ರಾಮಕೃಷ್ಣ ಶಾಸ್ತ್ರಿ
ಶಿವಶಕ್ತಿ ನಿಲಯ, ಮುಚ್ಚಿನ-574295 ದ. ಕ.

ಮೃಕಂಡು ಎಂಬ ಮಹಾಮುನಿಯು ಮರುದ್ವತಿ ಎಂಬ ಸತಿಯೊಂದಿಗೆ ಗೃಹಸ್ಥಾಶ್ರಮಿಯಾಗಿ ಕರ್ಮಾನುಷ್ಠಾನಗಳನ್ನು ಮಾಡಿಕೊಂಡಿದ್ದ. ಅವರಿಬ್ಬರೂ ಬಹು ಕಾಲ ದಾಂಪತ್ಯ ಜೀವನ ನಡೆಸಿದಾಗಲೂ ಪುತ್ ಎಂಬ ನರಕದಿಂದ ರಕ್ಷಿಸ ಬಲ್ಲಂತಹ ಸಂತಾನವನ್ನು ಪಡೆಯಲಿಲ್ಲ. ಇದೇ ಚಿಂತೆಯಲ್ಲಿ ಬೇಯುತ್ತಾ ಅವರು ಅದಕ್ಕಾಗಿ ಹಲವು ವ್ರತಗಳನ್ನು ಆಚರಿಸಿದರೂ ಫಲ ಕಾಣಲಿಲ್ಲ. ಆಗ ಮೃಕಂಡು ಸಾಕ್ಷಾತ್ ಶಿವನನ್ನೇ ಒಲಿಸಿಕೊಂಡು ಸಂತಾನಭಿಕ್ಷೆ ಬೇಡುವುದಾಗಿ ನಿರ್ಧರಿಸಿ, ಕಠಿಣವಾದ ತಪಶ್ಚರ್ಯೆಯನ್ನು ಕೈಗೊಂಡ.

ಅವನ ತಪಸ್ಸಿಗೆ ಮೆಚ್ಚಿ ಶಿವನು ಪ್ರತ್ಯಕ್ಷನಾಗಿ "ಮುನಿಯೇ ಪ್ರಸನ್ನನಾಗಿದ್ದೇನೆ. ನಿನಗೆ ಏನು ಬೇಕೋ ಅದನ್ನು ಕೋರಿಕೋ" ಎಂದು ಹೇಳಿದ. ಮೃಕಂಡುವು, "ಪರಮಾತ್ಮ ಸರ್ವಜ್ಞನಾದ ನಿನಗೆ ನಾನೇ ನನ್ನ ಯೋಚನೆಯನ್ನು ತಿಳಿಸಬೇಕೆ ? ಗೃಹಸ್ಥಾಶ್ರಮಿಯಾಗಿದ್ದೂ ನನಗೆ ಪುತ್ರಸಂತಾನವಿಲ್ಲದಿದ್ದರೆ ಮುಕ್ತಿ ಇಲ್ಲವಷ್ಟೆ ?" ಎಂದನು ವಿನೀತನಾಗಿ–ಶಿವನು ಮುಗುಳ್ನಕ್ಕು "ನಿನಗೆಂಥ ಮಗನು ಬೇಕು ? ದುರಾಚಾರಿಯಾದ ಚಿರಂಜೀವಿ ಬೇಕೋ ಸದ್ಗುಣವಂತನಾದ ಅಲ್ಪಾಯುಷಿ ಮಗನು ಬೇಕೋ? ಒಳ್ಳೆಯ ಮಗನಾದರೆ ಹದಿನಾರು ಸಂವತ್ಸರ ಮಾತ್ರ ಬದುಕುತ್ತಾನೆ" ಎಂದನು.

"ದೇವಾ, ಪಾಪಿಯಾದ ಮಗನು ಚಿರಂಜೀವಿಯಾಗಿದ್ದರೆ ತಾಯಿ ತಂದೆಗಳಿಗೇನೂ ಲಾಭವಿಲ್ಲ. ಸದ್ಗುಣವಂತನಾದ ಮಗನು ತನ್ನ ಆತ್ಮೋದ್ಧಾರದೊಂದಿಗೆ ಪಿತೃಗಳನ್ನು ಉದ್ಧರಿಸುತ್ತಾನೆ. ಅಲ್ಪಾಯುಷಿಯಾದರೂ ಒಳ್ಳೆಯ ಮಗನೇ ಹುಟ್ಟಲಿ" ಎಂದು ಮೃಕಂಡು ಕೋರಿದ. ಶಿವನು ಅವನನ್ನು ಅನುಗ್ರಹಿಸಿ ಅಂತರ್ಧಾನನಾದ.

ಅದರಂತೆ ಮೃಕಂಡುವಿಗೆ ಒಬ್ಬ ಮಗನು ಜನಿಸಿದ. ಅವನಿಗೆ ಮಾರ್ಕಂಡೇಯ ಎಂದು ಹೆಸರಿಟ್ಟು ಮೃಕಂಡವು ಐದನೆಯ ವಯಸ್ಸಿನಲ್ಲೆ ಬ್ರಹ್ಮೋಪದೇಶ ನೀಡಿದನು. ವೇದ ಶಾಸ್ತ್ರ ತರ್ಕ ವ್ಯಾಕರಣಾದಿಗಳಲ್ಲಿ ಅವನನ್ನು ನಿಪುಣನಾಗಿಸಿದ, ಆದರೆ ಮಗನು



ಬೆಳೆಯುತ್ತಿದ್ದಂತೆ ಮೃಕಂಡವು ಚಿಂತೆಯಿಂದ ಬಳಲಲಾರಂಭಿಸಿದ ಮಗನ ಪ್ರಾಯವು ಹದಿನಾರನೆಯ ಸಂವತ್ಸರಕ್ಕೆ ಕಾಲಿರಿಸಿದಾಗ ಅವನನ್ನು ಒಳಗೆ ಕರೆದು "ಕಂದಾ, ಪರಶಿವನ ಕರುಣ ಕಟಾಕ್ಷದಿಂದ ಜನಿಸಿದ ನಿನ್ನ ಜೀವನವು ಮುಗಿಯಲು ಇನ್ನು ಕೆಲವೇ ದಿನಗಳಿವೆ. ಈ ಅಲ್ಪಾವಧಿಯಲ್ಲೆ ನೀನು ನಿನ್ನ ಆತ್ಮಸಾಧನೆಯನ್ನು ಮಾಡಿಕೊಳ್ಳಬೇಕಾಗಿದೆ. ಜೊತೆಗೆ ಪಾರ್ವತೀಪತಿಯಾದ ಶಿವನ ಮೊರೆ ಹೊಕ್ಕು ಅನನ್ಯ ಭಕ್ತಿಯಿಂದ ಅವನನ್ನು ಆರಾಧಿಸು. ಪೂಜ್ಯರಾದ ಹಿರಿಯರು, ಮುನಿಪುಂಗವರು, ಬ್ರಾಹ್ಮಣರು ಎಲ್ಲಿ ಕಂಡರೂ ಅವರಿಗೆ ದೀರ್ಘದಂಡ ಪ್ರಣಾಮವನ್ನೆಸಗಿ ಅವರಿಂದ 'ದೀರ್ಘಾಯುಷ್ಯವಂತನಾಗು' ವಂತಹ ಆಶೀರ್ವಾದವನ್ನು ಪಡೆದುಕೋ. ನಿನಗೆ ಮೃತ್ಯುಂಜಯನ ಮಂತ್ರವನ್ನು ಉಪದೇಶಿಸುತ್ತೇನೆ. ಅನುಗಾಲವೂ ಅದನ್ನು ಜಪಿಸಿಕೊಂಡಿರು" ಎಂದು ಉಪದೇಶಿಸಿದ.

ಅನಂತರ ಮಾರ್ಕಂಡೇಯನು ತಂದೆಯ ಅನುಜ್ಞೆಯನ್ನು ಪಡೆದು ದಕ್ಷಿಣ ಸಮುದ್ರ ದಂಡೆಯ ನಿರ್ಜನವಾದರೂ ಒಂದು ರಮ್ಯವಾದ ವನಪ್ರದೇಶವನ್ನು ತಲುಪಿ, ಅಲ್ಲಿ ಆಶ್ರಮವೊಂದನ್ನು ಕಟ್ಟಿಕೊಂಡ. ಆಶ್ರಮದಲ್ಲಿ ಒಂದು ಶಿವಲಿಂಗವನ್ನು ಸ್ಥಾಪಿಸಿ ದಿನಾಲೂ ಭಕ್ತಿ ಶ್ರದ್ಧೆಗಳಿಂದ ಆ ಲಿಂಗವನ್ನು ಪೂಜಿಸುತ್ತಿದ್ದನು. ಮೃತ್ಯುಂಜಯ ಮಂತ್ರವನ್ನು ಜಪಿಸುತ್ತ ಬ್ರಾಹ್ಮಣರನ್ನು ವಂದಿಸಿ ಆಶೀರ್ವಾದ ಪಡೆಯುವ ವಿಧಿಯನ್ನು ಆಚರಿಸಿಕೊಂಡಿದ್ದ.

ಒಂದು ದಿನ ಆ ದಾರಿಯಾಗಿ ಸಪ್ತಋಷಿಗಳು ಆಗಮಿಸಿದರು. ಮಾರ್ಕಂಡೇಯನು ಅವರಿಗೆ ವಂದಿಸಿದಾಗ ಎಲ್ಲರೂ ದೀರ್ಘಾಯುಷಿಯಾಗುವಂತೆ ಹರಸಿದರು. ಆಗ ಕಶ್ಯಪನು ಅವನತ್ತ ದೃಷ್ಟಿ ಹರಿಸಿ, "ಎಲಾ, ಎಂತಹ ಪ್ರಮಾದವಾಯಿತು. ಈ ಬಾಲಕನ ಆಯುಷ್ಯವು ಮುಗಿಯುತ್ತ ಬಂದಿದೆ. ನಾವು ಅವನಿಗೆ ಹೀಗೆ ಹರಸಿದುದು ಅನೃತವಾಗಲಿಲ್ಲವೆ ?" ಎಂದನು.

ಚಿಂತಾಕುಲರಾದ ಸಪ್ತರ್ಷಿಗಳು ಸತ್ಯಲೋಕಕ್ಕೆ ತೆರಳಿ ಈ ಸಮಸ್ಯೆಯನ್ನು ಬ್ರಹ್ಮನೆದುರು ನಿವೇದಿಸಿಕೊಂಡಾಗ ಅವನು, "ನಿಮ್ಮ ಮಾತು ಸುಳ್ಳಾಗುವುದುಂಟೆ ? ಮೃತ್ಯುಂಜಯ ರೂಪನಾದ ಶಂಕರನು ಅವನನ್ನು ರಕ್ಷಿಸುತ್ತಾನೆ" ಎಂದು ಧೈರ್ಯ ಹೇಳಿದ

ಹೀಗಿರಲು ಮಾರ್ಕಂಡೇಯನ ಅವಸಾನಕಾಲವು ಸನ್ನಿಹಿತವಾಯಿತು. ಅವನು ಅವಸರವಸರವಾಗಿ ನಿತ್ಯಕರ್ಮಗಳನ್ನು ಮುಗಿಸಿ ಶಿವಪೂಜೆಗೆ ಕುಳಿತು ಭಕ್ತಿಯ ಚರಮ ಸೀಮೆಗೆ ತಲುಪಿ ಅದರಲ್ಲೆ ತಲ್ಲೀನನಾದನು. ಆಗ ಯಮನು ಮಹಿಷವನ್ನೇರಿ ಮಾರ್ಕಂಡೇಯನ ಪ್ರಾಣವನ್ನೊಯ್ಯಲು ಬಂದನು. ಮಾರ್ಕಂಡೇಯನು ಅವ

ನೊಂದಿಗೆ, "ಯಮಧರ್ಮ, ಸ್ವಲ್ಪ ತಾಳು, ನಾನಿನ್ನೂ ಶಿವಪೂಜೆಯನ್ನು ಮುಗಿಸಿಲ್ಲ" ಎಂದು ಬೇಡಿಕೊಂಡ.

ಅದಕ್ಕೆ ಯಮನು "ನಿನ್ನ ಆಯುಷ್ಯ ಮುಗಿದಿದೆ. ಆಯುಷ್ಯ ಮುಗಿದ ಯಾವ ಜೀವಿಯನ್ನು ಒಂದು ಕ್ಷಣ ಕೂಡ ಇಲ್ಲಿ ಉಳಿಸಲಾರೆ. ಬಾ॥ ಎಂದು ಅವನತ್ತ ತನ್ನ ಪಾಶವನ್ನೆಸೆದ. ಮಾರ್ಕಂಡೇಯನು ಶಿವಲಿಂಗವನ್ನು ಗಟ್ಟಿಯಾಗಿ ಅಪ್ಪಿಕೊಂಡು, ಮೃತ್ಯುಂಜಯಾ, ಪರಶಿವಾ ರಕ್ಷಿಸು" ಎಂದು ಅನನ್ಯವಾಗಿ ಬೇಡಿಕೊಳ್ಳಲಾರಂಭಿಸಿದ.
ಆಗ ಶಿವಲಿಂಗದಿಂದ ಪರಮೇಶ್ವರನ್ನು ಪ್ರತ್ಯಕ್ಷನಾಗಿ, "ಎಲಾಯಮ, ನನ್ನ ಭಕ್ತರನ್ನು ಮುಟ್ಟಲು ನಿನಗೆಷ್ಟು ಧೈರ್ಯವೋ ?" ಎಂದು ಗರ್ಜಿಸಿ, ಯಮನನ್ನು ಕಾಲಿನಿಂದ ಅತ್ತ ತಳ್ಳಿದ. ಮಾರ್ಕಂಡೇಯನ ಮೈದಡವಿ, "ನೀನು ಹದಿನಾಲ್ಕು ಕಲ್ಪಗಳ ಕಾಲವೂ ಹದಿನಾರು ವರ್ಷದ ಬಾಲನಾಗಿಯೇ ಚಿರಕಾಲ ಬಾಳು" ಎಂದು ಹರಸಿ ಮಾಯವಾದ.

ಅನಂತರ ಮಾರ್ಕಂಡೇಯನು ತಂದೆಯ ಸಲಹೆಯಂತೆ ನರನಾರಾಯಣರನ್ನು ಉದ್ದೇಶಿಸಿ ಉಗ್ರವಾದ ತಪಸ್ಸನ್ನು ಕೈಗೊಂಡು ಆರು ಮನ್ವಂತರಗಳನ್ನು ಕಳೆದನು. ಏಳನೆಯ ಮನ್ವಂತರದಲ್ಲಿ ಅವನ ತಪಸ್ಸಿನ ಜ್ವಾಲೆಯೂ ಇಂದ್ರಲೋಕವನ್ನು ಬಾಧಿಸಿತು. ಆಗ ಇಂದ್ರನು ಮಾರ್ಕಂಡೇಯನ ತಪಸ್ಸನ್ನು ಕೆಡಿಸಲು ಪುಂಜಿಕಸ್ಥಳಿ ಎಂಬ ಅಪ್ಸರಾಸ್ತ್ರೀಯನ್ನು ಕಳುಹಿಸಿದ. ಅವಳು ಅವನೆದುರು ಬಂದು ಯಾವ ವಿಲಾಸೀ ಹಾವಭಾವಗಳಿಂದ ಕೆರಳಿಸಲೆತ್ನಿಸಿದರೂ ರಾಗದ್ವೇಷಗಳನ್ನು ಗೆದ್ದಿದ್ದ ಋಷಿಯನ್ನು ವಿಚಲಿತ ಗೊಳಿಸಲಿಲ್ಲ. ಪುಂಜಿಕಸ್ಥಳಿ ನಿರಾಶಳಾಗಿ ಇಂದ್ರನ ಬಳಿಗೆ ಮರಳಿದಳು.

ಬಳಿಕ ನರ ನಾರಾಯಣರು ಮಾರ್ಕಂಡೇಯನಿಗೆ ಪ್ರತ್ಯಕ್ಷರಾಗಿ ಬೇಕಾದ ವರ ಕೋರುವಂತೆ ಹೇಳಿದಾಗ "ನಿಮ್ಮ ಮಾಯೆಯನ್ನು ಕಾಣುವ ಕೃಪೆದೋರಿ" ಎಂದು ಆತ ಬೇಡಿದ. "ಸರಿ" ಎಂದು ಅವರು ಮಾಯವಾದರು, ಮಾರ್ಕಂಡೇಯನು ಅದನ್ನೇ ಎದುರು ನೋಡುತ್ತಾ ಪುಷ್ಪಭದ್ರಾ ನದಿಯ ತೀರದಲ್ಲಿ ಕುಳಿತುಕೊಂಡ. ಆಗ ಭಯಂಕರ ಸಿಡಿಲು ಮಿಂಚುಗಳೊಂದಿಗೆ ಕುಂಭದ್ರೋಣ ಮಳೆಯು ಸುರಿಯಲಾರಂಭಿಸಿ ಎಲ್ಲಿ ನೋಡಿದರೂ ಜಲಮಯವಾಯಿತು. ಆ ನೀರಿನಲ್ಲಿ ಮಾರ್ಕಂಡೇಯನು ತೇಲುತ್ತ ಲಕ್ಷ ಲಕ್ಷ ವರುಷಗಳ ಕಾಲ ಸಾಗಿ ಒಂದು ಸಣ್ಣ ದ್ವೀಪವನ್ನು ತಲುಪಿದ. ಅಲ್ಲೊಂದು ಹೂ ಹಣ್ಣುಗಳಿಂದ ಭರಿತವಾದ ಆಲದಮರವಿತ್ತು. ಅದರ ಎಲೆಯಲ್ಲಿ ದೇದೀಪ್ಯಮಾನವಾದ ಮಗುವೊಂದು ಮಲಗಿತ್ತು.

ಮಾರ್ಕಂಡೇಯನು ಒಡನೆ ಅಣುವಾಗಿ ಆ ಮಗುವಿನ ಹೊಟ್ಟೆಯೊಳಗೆ ಹೋಗಿ ವಿಶ್ವರೂಪ ಎಂದು ಮಹಾತ್ಮರು ಯಾವುದನ್ನು ವರ್ಣಿಸಿದ್ದಾರೋ ಅದನ್ನೆಲ್ಲ ಕಂಡು



ಹೊರಗೆ ಬಂದನು. ಅನಂತರ ಶಿಶುವನ್ನು ಎತ್ತಿಕೊಳ್ಳಲು ಕೈ ಚಾಚಿದಾಗ ಎಲ್ಲವೂ ಅದೃಶ್ಯವಾಯಿತು. ತಾನೊಬ್ಬನೇ ಧ್ಯಾನಸ್ಥನಾಗಿ ಕುಳಿತಿದ್ದ ಋಷಿಗೆ ಇದೆಲ್ಲವೂ ಮಾಯೆಯೆಂದು ತಿಳಿಯಿತು.

ನೀರಿನಲ್ಲಿ ಆ ಮಗು ತೇಲುತ್ತ ಬಂದಾಗ ಅದನ್ನು ಹಿಡಿಯಲು ಹೋಗಿ ಆತ ನೀರಿನ ಸುಳಿಗೆ ಬೀಳುತ್ತಾನೆಂದೂ ಶಿವನು ಪ್ರತ್ಯಕ್ಷನಾಗಿ, "ಈ ಮಗು ಸಾಮಾನ್ಯವಾದುದಲ್ಲ. ಆತ ಮಹಾವಿಷ್ಣು, ಬ್ರಹ್ಮನೆಂದರೂ ಅವನೇ" ಎಂದು ಹೇಳಿದ ಕತೆ ಭಾಗವತದಲ್ಲಿದೆ.

ಗೋಮತಿ, ಸರಯೂ ನದಿಗಳು ಸಂಗಮಿಸುವ ಭಾಗೇಶ್ವರದಲ್ಲಿ ಮಾರ್ಕಂಡೇಯ ಕಠಿಣ ತಪಸ್ಸು ಮಾಡುತ್ತಿದ್ದಾಗ ಗಗನ ಮಾರ್ಗದಲ್ಲಿ ಶಿವಶಕ್ತಿಯರು ಸಂಚಾರ ಕೈಗೊಂಡಿದ್ದರು. ಅವನನ್ನು ನೋಡಿ ಶಕ್ತಿ, "ಆ ಬ್ರಾಹ್ಮಣನನ್ನು ಅನುಗ್ರಹಿಸೋಣವೆ ?" ಎಂದು ಕೇಳಿದಳು. ಅದಕ್ಕೆ ಶಿವನು ನಕ್ಕು "ಅವನಿಗೆ "ಆ ಬ್ರಾಹ್ಮಣನನ್ನು ಅನುಗ್ರಹಿಸೋಣವೆ?" ಎಂದು ಕೇಳಿದಳು. ಅದಕ್ಕೆ ಶಿವನು ನಕ್ಕು "ಅವನಿಗೆ ನಮ್ಮ ಅನುಗ್ರಹದರ್ಶನಗಳಲ್ಲಿ ಅಪೇಕ್ಷೆ ಇಲ್ಲ ಮುಕ್ತಿಯನ್ನು ತಿರಸ್ಕರಿಸಿದ ಅವನಿಗೆ ನಾವೇನು ಕೊಡಬಲ್ಲೆವು?" ಎಂದನು.

ಆದರೂ ಶಕ್ತಿಯ ಒತ್ತಾಯಕ್ಕಾಗಿ ತನ್ನೆದುರು ಕಾಣಿಸಿಕೊಂಡ ಶಿವನಲ್ಲಿ ಆ ತ್ರಿಕಾಲಜ್ಞಾನಿಯು ಪರಮಾತ್ಮನಲ್ಲಿಯೂ ಭಗವದ್ಭಕ್ತರಲ್ಲಿಯೂ ಸದಾಕಾಲ ತಾನು ಭಕ್ತಿಯಿಡುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದ.

ಧೂಮೋರ್ಣೆ ಎಂಬ ಸಾಧ್ವಿಯನ್ನು ಸತಿಯಾಗಿ ಪಡೆದ ಮಾರ್ಕಂಡೇಯ ಸ್ತ್ರೀಯರ ಗುಣದೋಷ, ಪಾತಿವ್ರತ್ಯ, ಕನ್ಯಾದಾನ ಇತ್ಯಾದಿಗಳ ಬಗೆಗೆ ಉಲ್ಲೇಖಿಸಿದ್ದಾನೆ. ಪಾಂಡವರಿಗೆ ಆತ ಹಲವಾರು ಸತ್ಕಥೆಗಳನ್ನು ಪುರಾಣ ಕಥೆಗಳನ್ನು ಬೋಧಿಸಿದನು. ಅವನ ಹೆಸರಿನಲ್ಲೇ ಒಂದು ಪುರಾಣವು ಪ್ರಖ್ಯಾತಗೊಂಡಿದೆ. ಇವನು ಭೃಗು ಮಹರ್ಷಿಯ ಸಂತತಿಗೆ ಸೇರಿದವ. ದುರ್ಗಾ ಸಪ್ತಶತಿಯೆಂದು ಪ್ರಖ್ಯಾತವಾದ ದೇವಿಮಹಾತ್ಮೆಯನ್ನು ಅವನೇ ರಚಿಸಿದ.

---

ಆಸೆಗೆ ಸತ್ತುದು ಕೋಟಿ,
ಆಮಿಷಕ್ಕೆ ಸತ್ತುದು ಕೋಟಿ,
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ,
ಗುಹೇಶ್ವರ, ನಿಮಗಾಗಿ ಸತ್ತವರಾರನೂ ಕಾಣೆ.

—ಅಲ್ಲಮ ಪ್ರಭು

# ಸಮಾಜವಾದಿ ಬಸವಣ್ಣ

—ಶ್ರೀಮತಿ ಸರಳ ಮಂಜುನಾಥ್

ನಮ್ಮ ನಾಡಿನಲ್ಲಿ ಅನೇಕ ಸಿದ್ಧಪುರುಷರು ಜನ್ಮ ತಳೆದಿದ್ದಾರೆ ಧಾರ್ಮಿಕವಾಗಿ ಚಿಂತನ-ಮಂಥನಗಳನ್ನು ಮಾಡಿದ್ದಾರೆ. ಆದರೆ ಬಸವಣ್ಣನವರು ಒಂದು ಧರ್ಮದ ಪ್ರವರ್ತಕರಷ್ಟೇ ಅಲ್ಲ, ನವಪಂಥದ ನಿರ್ಮಾಪಕರು, ನೂತನ ವಿಚಾರವಾಹಿನಿಯ ಮೂಲಪುರುಷರು. ವಿಶ್ವದ ಎಲ್ಲಾ ಮಾನವರೂ ಒಂದೇ ಎಂಬ ಸಾರ್ವತ್ರಿಕ ತತ್ವವನ್ನು ಸಾರಿದ, ಹಿಂದಿನಿಂದ ಬಂದ ಪರಂಪರೆಯ ಹಿಡಿತದಿಂದ ಪಾರಾದ ಆಚಾರ-ವಿಚಾರ ಸಂಹಿತೆಯನ್ನು ಕೊಟ್ಟ ಮಹಾಗುರುಗಳು. ೧೨ನೆಯ ಶತಮಾನದಲ್ಲಿ ಬಸವಣ್ಣನವರು ಮಾಡಿದ ಕ್ರಾಂತಿ, ಯಾವುದೋ ಒಂದು ರಂಗದಲ್ಲಿ ಅಲ್ಲ, ಅದು ಸರ್ವ ವ್ಯಾಪಿಯಾಗಿತ್ತು. ಸಮತಾವಾದವೇ ಅವರ ಕ್ರಾಂತಿಯ ಮೂಲಬಿಂದುವಾಗಿತ್ತು. ಸಾಮಾಜಿಕ, ಧಾರ್ಮಿಕ ಮತ್ತು 'ಆರ್ಥಿಕ ಸಮಾನತೆಗಳು ಅವರ ಸಮತಾವಾದದ ಮೂರು ಮುಖಗಳಾಗಿದ್ದವು. ಅಮಾನವೀಯ ಕಟ್ಟುಪಾಡುಗಳಿಗೆ ಒಳಗಾಗಿದ್ದ ಸಮಾಜದಲ್ಲಿ ಒಂದು ವರ್ಗದವರು ಪಶುಗಳಿಗಿಂತಲೂ ನಿಕೃಷ್ಟ ಜೀವನ ನಡೆಸುತ್ತಿದ್ದುದನ್ನು ಕಂಡು ಬಸವಣ್ಣನವರು ಮರುಗಿದವರು- 'ಮಾನವ ಮಾನವರಲ್ಲಿ ಮೇಲು ಕೀಳೆಂಬ ಭಾವ ಇರಬಾರದು, ಜನ್ಮ ಮಾತ್ರದಿಂದಲೇ ಯಾರೂ ಮೇಲಲ್ಲ, ಕೀಳಲ್ಲ ; ಮೇಲು-ಕೀಳು, ಕುಲಜ-ಅಂತ್ಯಜ ಇವು ಮಾನವ ತನ್ನ ಸ್ವಾರ್ಥಕ್ಕಾಗಿ ನಿರ್ಮಿಸಿಕೊಂಡು ಭೇದಗಳು, ಕಟ್ಟು ಪಾಡುಗಳು. ಇವುಗಳಿಗೆ ಬೆಲೆ ಕೊಡಬೇಕಾಗಿಲ್ಲ ಎಂದು ಸಾರಿದರು.'

ದಲಿತರ ಸ್ಪರ್ಶದಿಂದ ಮೈಲಿಗೆಯಾಗುತ್ತದೆ, ಕ್ಷೌರಿಕರನ್ನು ಕಂಡರೆ ಅಪಶಕುನ, ವಿಧವೆಯರು ಎದುರಾದರೆ ಅಮಂಗಲ ಇತ್ಯಾದಿ ಮೂಢನಂಬಿಕೆ ಹಾಗೂ ಅಮಾನವೀಯ ನಡವಳಿಕೆಗಳನ್ನು ಖಂಡಿಸಿದರಲ್ಲದೇ ತಮ್ಮ ತತ್ವ, ಬೋಧನೆ ಹಾಗೂ ಕೃತಿಗಳ ಮೂಲಕ ಜನಜಾಗೃತಿಯನ್ನುಂಟುಮಾಡಿ ಅಂತಹವುಗಳನ್ನು ತೊಡೆದು ಹಾಕುವಲ್ಲಿ ಸಾಕಷ್ಟು ಯಶಸ್ವಿಯಾದರು.

ಹುಟ್ಟಿನಿಂದಲೇ ವ್ಯಕ್ತಿಯನ್ನು ಮೇಲುಕೀಳೆಂದು ವಿಭಜಿಸುವ. ಅನುವಂಶೀಯವಾಗಿ ಕಸುಬನ್ನು ನಿರ್ಧರಿಸುವ ಅನಿಷ್ಟ ಪದ್ಧತಿಯನ್ನು ವಿರೋಧಿಸಿ, ಜಾತ್ಯತೀತ ಧೋರಣೆಯನ್ನು ರೂಪಿಸಿದರು. ಜಾತಿ-ವ್ಯಕ್ತಿಗಳ ಸಂಬಂಧವನ್ನು ಅವರು ಈ ರೀತಿ ಹೇಳಿದ್ದಾರೆ:

ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ,ವೇದವನೋದಿ
ಹಾರುವನಾದ
ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ?
ಇದು ಕಾರಣ ಕೂಡಲಸಂಗಮದೇವಾ
ಲಿಂಗ ಸ್ಥಲವನರಿದವನೇ ಕುಲಜನು.

ಕಮ್ಮಾರ' ಬಡಿಗ, ಅಕ್ಕಸಾಲಿಗ, ಇತ್ಯಾದಿಗಳು ಕೈಕೊಳ್ಳುವ ವೃತ್ತಿ ಕಾಯಕ ಸೂಚಕಗಳೇ ಹೊರತು ಜಾತಿಗಳಲ್ಲ ಎಂದು ಅವರು. ಚತುರ್ವರ್ಣ ಪದ್ಧತಿಯ ರೀತ್ಯ ಒಂದೊಂದು ವರ್ಗದವರೂ ಬ್ರಹ್ಮನ ಶರೀರದ ಒಂದೊಂದು ಅಂಗದಿಂದ ಜನಿಸಿದವರು ಎಂಬ ಅನೈಸರ್ಗಿಕವಾದವನ್ನು "ಕರ್ಣದಲ್ಲಿ ಜನಿಸಿದವರುಂಟೇ ಜಗದೊಳಗೆ?" ಎಂದು ಹಾಸ್ಯ ಮಾಡಿ ಪ್ರಶ್ನಿಸಿದ್ದಾರೆ

ಕಾಯಕದ ಆನುವಂಶಿಕತೆಯನ್ನು ತಿರಸ್ಕರಿಸಿದ ಬಸವಣ್ಣ, ಹುಟ್ಟು ಪ್ರತಿಭೆ ಮತ್ತು ಆಸಕ್ತಿಗಳಿಗನುಗುಣವಾಗಿ ಯಾರು ಯಾವ ವೃತಿಯನ್ನಾದರೂ ಜೀವನಾಧಾರಕ್ಕೆ ಆಶ್ರಯಿಸಬಹುದಲ್ಲದೆ ಮಡಿವಾಳನ ಮಗ ಮಡಿವಾಳನಾಗಿಯೇ ಜೀವಿಸಬೇಕು. ಚಮ್ಮಾರನ ಮಗ ಚಪ್ಪಲಿಯನ್ನು ಹೊಲಿದೇ ಜೀವನ ಹೊರೆಯಬೇಕೆಂಬುದು ಸಲ್ಲ. ಸ್ವಂತ ಪರಿಶ್ರಮದಿಂದ ಯಾವುದೇ ವೃತ್ತಿಯನ್ನು ಕೈಗೂಡಿಸಿಕೊಂಡು ಬೆಳೆಯುವ ಅವಕಾಶವಿದ್ದರೆ ಮಾತ್ರ ವ್ಯಕ್ತಿಯ, ಸಮಾಜದ ಪ್ರಗತಿ ಸಾಧ್ಯ ಎಂದು ಹೇಳಿ ತುಳಿತಕ್ಕೆ, ಶೋಷಣೆಗೆ ಒಳಗಾದ ಜನರಲ್ಲಿ ಹೊಸ ಚಿಂತನೆಗೆ ಎಡೆ ಮಾಡಿಕೊಟ್ಟರು.

ಆಧ್ಯಾತ್ಮದಲ್ಲಿ ಇನ್ನಿಲ್ಲದ ಎತ್ತರಕ್ಕೇರಿದ್ದರೂ ಬಸವಣ್ಣ ಎಂದೂ ವಾಸ್ತವಕ್ಕೆ ವಿಮುಖರಾಗಲಿಲ್ಲ, ತಮ್ಮ ಕರ್ತವ್ಯ ಪ್ರಪಂಚದಿಂದ ದೂರ ಸರಿಯಲಿಲ್ಲ. ಮರ್ತ್ಯವೆಂಬೀ ಕರ್ತಾರನ ಕಮ್ಮಟದಲ್ಲಿ ಕರ್ಮಯೋಗಿಯಾಗಿ ಬಾಳಿದರು. ಸಾಧ್ಯವಿಲ್ಲವೆಂದು ಹೇಳಿ ಆಧ್ಯಾತ್ಮದ ಚೌಕಟ್ಟಿನಲ್ಲಿ ಸ್ವಾವಲಂಬನೆಯ ಸೂತ್ರವನ್ನು ಸಮೀಕರಿಸಿದರು,

ಅವರ ವಚನಗಳಲ್ಲಿ ಬರುವ 'ಸ್ಥಾವರ-ಜಂಗಮ' ಪದಗಳಿಗೆ ಬಸವಣ್ಣ ಶಬ್ದಕ್ಕೆ ಮೀರಿದ ವಿಶಾಲಾರ್ಥವನ್ನು ನೀಡಿದರು. 'ಸ್ಥಾವರಕ್ಕಳಿವುಂಟು-ಜಂಗಮಕ್ಕಳಿವಿಲ್ಲ' ಇಲ್ಲಿಯ 'ಸ್ಥಾವರ' ಪದ ಸಂಪತ್ತು, ಐಶ್ವರ್ಯ,ಹಣ ಮುಂತಾದುವನ್ನು ಸಂಕೇತಿಸಿದರೆ, 'ಜಂಗಮ'ವು ಅತ್ಯಾಶೆರಹಿತ ದುಡಿಮೆ, ಸಚ್ಚಾರಿತ್ರ್ಯ ಪೀಳಿಗೆ ಮತ್ತು ಸತ್ಯಶುದ್ಧ ಕಾಯಕಗಳ ಸುಸಂಬದ್ಧ ಅರ್ಥಸಂಗಮವನ್ನು ಪ್ರತಿನಿಧಿಸುತ್ತದೆ. ಸಿರಿಸಂಪತ್ತುಗಳು ಸ್ಥಿರವಲ್ಲಾ. ಆದರೆ, ಕಾಲದೊಂದಿಗೆ ಚಿಗುರುತ್ತಲೇ ಸಾಗುವ ಜೀವನ



ಮತ್ತು ಮೌಲ್ಯಗಳು ಮಾತ್ರ ಚಿರಂತನ ಎಂಬುದೇ ಅವರ ಜಂಗಮಕ್ಕಳಿವಿಲ್ಲ ಎಂಬುದರ ಅರ್ಥವಾಗಿದೆ. ನಾವು ಮಾಡುವ 'ಕಾಯಕವೇ ಕೈಲಾಸ'. ಇದಕ್ಕಾಗಿ ನಾವು ಬೇರೆಯದೇ ಪ್ರತಿಫಲವನ್ನು ಬಯಸಬಾರದು. ಸತ್ಯಶುದ್ಧ ಕಾಯಕದ ಫಲ ನಮಗೂ ಉಂಟು. ಇದು ಜಂಗಮದ ಅಮರತ್ವ. ನಿಷ್ಠೆಯಿಂದ ಕಾಯಕವನ್ನು ಮಾಡಿದರೆ ಅದರಲ್ಲಿಯೇ ಕೈಲಾಸದ ದಿವ್ಯತೃಪ್ತಿ ಸಂತಸಗಳು ಲಭಿಸುತ್ತವೆ. ವೃತ್ತಿಯಲ್ಲಿ ಮೇಲು ಕೀಳೆಂಬುದಿಲ್ಲ. ಪ್ರತಿಯೊಂದು ವೃತ್ತಿಯೂ ಅದರದೇ ಆದ ವೃತ್ತಿ ಗೌರವವನ್ನೂ ಹೊಂದಿದೆ. ಇದರಲ್ಲಿ ಮೇಲುಕೀಳಿನ ಪ್ರಶ್ನೆಯೇ ಇಲ್ಲ ಎಂದು ವೃತ್ತಿಸಮಾನತೆಯನ್ನೂ ಎತ್ತಿ ಹಿಡಿಯುವ ಮೂಲಕ ಇಂದಿನ ಸಮಾಜವಾದದ ತತ್ವವೊಂದನ್ನು ಬೆಂಬಲಿಸಿದ್ದಾರೆ. 'ವ್ರತ ತಪ್ಪಿದರೆ ಸೈರಿಸಬಹುದು; ಕಾಯಕ ತಪ್ಪಿದರೆ ಸೈರಿಸಲಾಗದು'. ಇದು ಬಸವ ತತ್ವದ ಚಿರಂತನ ಘೋಷಣೆ. ನಾವು ಮಾಡುವ ಯಾವುದೇ ವ್ರತಾಚರಣೆ ಆತ್ಮೋದ್ಧಾರಕ್ಕೆ ಮಾತ್ರ ಸಹಾಯಕ. ಆದರೆ ನಾವು ಮಾಡುವ ಕೆಲಸ ಇಡೀ ಸಮುದಾಯದ ಉದ್ಧಾರಕ್ಕೆ ಒಂದು ಸೂತ್ರ ಎಂದು ಸಾರುವ ಮೂಲಕ ವ್ಯಷ್ಟಿಯ ಸಮಷ್ಟಿಯ ಮುನ್ನಡೆಗೆ ಪ್ರಗತಿಗೆ ದುಡಿಮೆಯ ಮಹತ್ವ ಎಂಥದ್ದು ಎಂಬುದನ್ನು ಸಾರಿದರು.

ಸಮಾಜದಲ್ಲಿನ ಉಳ್ಳವರು-ಇಲ್ಲದವರ ನಡುವೆ ಸಂಘರ್ಷ ಕಡಿಮೆಯಾಗಬೇಕಾದರೆ, ಸಂಪತ್ತಿನ ಸಮಾನ ಹಂಚಿಕೆಯಾಗಬೇಕೆಂಬ ಸಮಾಜವಾದವನ್ನು ಅವರು ಘೋಷಿಸಿದರು. ತಮ್ಮ 'ದಾಸೋಹ' ತತ್ವದಲ್ಲಿನ ಮೂರು ಮುಖಗಳಾದ ಶರೀರಶ್ರಮ, ಜ್ಞಾನದಾನ ಹಾಗೂ ಧನಸಮರ್ಪಣೆ ಇವು ನಮ್ಮಲ್ಲಿರುವ ಸಂಪತ್ತು. ಜ್ಞಾನ ಹಾಗೂ ಶಕ್ತಿಗಳು ಬೇರೆಯವರಿಗೂ ದೊರೆಯುವಂತೆ ಮಾಡಬೇಕು ಎನ್ನುವ ಪುನರ್ ಹಂಚಿಕೆಯ ಅಗತ್ಯ ಕುರಿತ ಸೂಕ್ಷ್ಮ ಭಾವನೆಗಳಿಂದ ಬಿಂಬಿತವಾಗಿದೆ.

ಸ್ತ್ರೀ ಕುಲವು ಎಂದೆಂದೂ ಕೃತಜ್ಞತೆಯಿಂದ ಸ್ಮರಿಸಬೇಕಾದ ಮಹಾವ್ಯಕ್ತಿ ಬಸವಣ್ಣನವರು. ಹೆಣ್ಣು, ವ್ಯಕ್ತಿ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ ಹಾಗೂ ಸಾಮಾಜಿಕ ಸ್ವಾತಂತ್ರ್ಯಗಳಿಂದ ಸಂಪೂರ್ಣ ವಂಚಿತಳಾಗಿ ಕೇವಲ ಭೋಗವಸ್ತುವಾಗಿದ್ದ ಸಂದರ್ಭದಲ್ಲಿ ಅವರನ್ನು ಮೇಲೆತ್ತಿ ನಿಲ್ಲಿಸಿದ ಕೀರ್ತಿ ಅವರದು.

ಸ್ತ್ರೀಯೂ ಸಹ ಪುರುಷನಂತೆ ನಿಸರ್ಗದ ಮತ್ತೊಂದು ಕಣ್ಣು-ಎರಡು ಚಕ್ರಗಳು ಸಮನಾಗಿ ಹರಿದಾಗ ಮಾತ್ರ ಬಂಡಿಯ ಓಟ. ಹಾಗೆಯೇ ಸಂಸಾರವೂ, ಸಮಾಜವೂ, ಇಲ್ಲಿ ಹೆಣ್ಣಿಗೂ ಗಂಡಿನಷ್ಟೇ ಪ್ರಾಶಸ್ತ್ಯವಿದ್ದೇ ಇದೆ-ಬದುಕನ್ನು ಅರ್ಥಮಾಕೊಳ್ಳಲು, ಸರಾಗವಾಗಿ ಅದನ್ನು ಎದುರಿಸಲು ಅವಳಿಗೆ ವಿದ್ಯೆಯು ಅವಶ್ಯಕತೆಯಿದೆ. ಸುಪ್ತ ಶಕ್ತಿಗಳ ಆವಿಷ್ಕಾರ ಮಾಡಿಕೊಳ್ಳಲು ಅವಳಿಗೆ ಸ್ವಾತಂತ್ರ್ಯ ಬೇಕಾಗಿದೆ. ಅವಳಿಗೂ ಧರ್ಮ ಸಂಸ್ಕಾರದ ಆವಶ್ಯಕತೆಯಿದೆ. ಅದಕ್ಕವಳು ಅರ್ಹಳು ಕೂಡ. ಆಕೆ ಸ್ವತಃ ಪೂಜೆ ಮಾಡಬಲ್ಲಳಲ್ಲದೇ ಪೂಜಾರ್ಹಳು ಕೂಡ. ದೈಹಿಕವಾಗಿ ಅವಳು ದುರ್ಬ

ಲಳೇ ಹೊರತು, ದೈವೀಸಾಧನೆಗೆ ಬೇಕಾಗಿರುವ ಮಾನಸಿಕ ದೃಢತೆ ಅವಳಲ್ಲಿ ಇದ್ದೇ ಇದೆ. ಆಕೆ ಸಾಧನೆ ಮತ್ತು ಗುರುತ್ವ ಎರಡಕ್ಕೂ ಅರ್ಹಳು ಎಂಬ ವಾಸ್ತವ ಸತ್ಯವನ್ನೂ ಮನದಟ್ಟು ಮಾಡಿದರು. ಹಾಗೆಯೇ ವ್ಯಕ್ತಿ ವಿಕಾಸಕ್ಕೆ ಪ್ರತಿಯೊಬ್ಬರಿಗೂ ವಿದ್ಯೆ ಲಭ್ಯವಾಗಬೇಕಲ್ಲದೆ ಅದು ಯಾವುದೇ ಒಂದು ವರ್ಗಕ್ಕೆ ಸೀಮಿತವಾಗಬಾರದೆಂದರು.

ಬಸವಣ್ಣನವರ ಒಂದೊಂದು ನುಡಿಯೂ ವಿಶ್ವವನ್ನು' ಮನುಕುಲವನ್ನು ಜಾಗೃತಗೈಯ್ಯಲು ಉದ್ದೇಶಿಸಿ ಹೇಳಿದುವುಗಳಾಗಿವೆ. ಮಾನವನನ್ನು ನಾಗರಿಕವಾಗಿ ಸಂಸ್ಕರಿಸುವ ಉದ್ದೇಶದಿಂದ ಬಸವಣ್ಣನವರು ಹೇಳಿರುವ ಮಾತುಗಳು ತ್ರಿಕಾಲ ಸತ್ಯಗಳು. ಪ್ರಾಂತೀಯ ಭಾಷೆಯ ೧೨ನೆಯ ಶತಮಾನದ ಪರಿಸರದ ಹೊದಿಕೆ ಹೊದ್ದ ವಚನಗಳನ್ನು ಅನಾವರಣಗೊಳಿಸಿದರೆ, ಕಾಣುವುದೆಲ್ಲಾ ಬರೀ ಮುತ್ತು ಮಾಣಿಕ್ಯಗಳೇ! ಲೋಕವನ್ನು ಬೆಳಗುವ ಉಜ್ವಲ ಪ್ರಭೆಯ ದೀಪಾಂಜಲಿಗಳೇ- ಇಂಥ ದೀಪಾವಳಿಗಳನ್ನು ನೀಡಿದ ಬಸವಣ್ಣನವರು ಇಡೀ ವಿಶ್ವದ ದಾರಿ ದೀಪವಾಗಿದ್ದಾರೆ, ವಿಶ್ವಗುರುವಾಗಿದ್ದಾರೆ.





# ಅನುಭಾವ


—ಡಾ|| ಎಚ್. ತಿಪ್ಪೇರುದ್ರಸ್ವಾಮಿ


ಅನುಭಾವ ಎನ್ನುವ ಮಾತನ್ನು ಆಧ್ಯಾತ್ಮವಲಯಕ್ಕೆ ತಂದು ಅದಕ್ಕೊಂದು ವಿಶಿಷ್ಟವಾದ ಅರ್ಥವನ್ನು ಕಲ್ಪಿಸಿ ಕೊಟ್ಟವರು, ಮತ್ತು ತಮ್ಮ ಅನುಭವ ಸಂಪತ್ತಿನಿಂದ ಅದನ್ನು ಜೀವಂತಗೊಳಿಸಿದವರು ೧೨ನೇ ಶತಮಾನದ ಶರಣರು. ಅದಕ್ಕೆ ಮೊದಲು ಈ ಮಾತು ಪ್ರಧಾನವಾಗಿ ಕಾವ್ಯ ಮೀಮಾಂಸೆಯಲ್ಲಿ ಒಂದು ಪಾರಿಭಾಷಿಕ ಶಬ್ದವಾಗಿ ಬಳಕೆಯಲ್ಲಿತ್ತು. ಭರತನ ಪ್ರಸಿದ್ಧವಾದ ರಸ ಸೂತ್ರದಲ್ಲಿ, ಈ ಮಾತು ಬರುವುದಲ್ಲದೆ ಅನಂತರದ ಕಾವ್ಯ ಮೀಮಾಂಸಕರ ವ್ಯಾಖ್ಯಾನದಲ್ಲಿಯೂ ಅದು ಬೆಳೆದು ಬಂದಿತ್ತು. ವಿಭಾವ, ಅನುಭಾವ ವ್ಯಭಿಚಾರೀ ಭಾವಗಳ ಸಂಯೋಗದಿಂದ ರಸ ನಿಷ್ಪತ್ತಿಯಾಗುತ್ತದೆಂಬ ಆ ಸೂತ್ರದಲ್ಲಿ ಅನುಭಾವದ ಸ್ಥಾನವೇನೆಂಬುದನ್ನು ಅದರ ಸ್ವರೂಪ ಲಕ್ಷಣಗಳೇನೆಂಬುದನ್ನೂ ಕಾವ್ಯ ಮೀಮಾಂಸಕರು ಸ್ಪಷ್ಟ ಪಡಿಸುತ್ತ ಬಂದಿದ್ದರು. "ಭಾವವನ್ನು ಅನುಸರಿಸಿದ ದೈಹಿಕ ಪ್ರತಿಕ್ರಿಯೆ" -ಎಂಬ ಇದರ ಮೂಲ ಎಳೆಯನ್ನು ಹಿಡಿದು ಶರಣರು ಇನ್ನೂ ಆಳಕ್ಕೆ ಇಳಿದರು. ಆಧ್ಯಾತ್ಮಿಕ ಅನುಭವದ ಆಂತರಿಕ ಆಳವನ್ನೂ, ಅದರ ಉತ್ತುಂಗ ಶಿಖರದ ಅನಿರ್ವಚನೀಯತೆಯನ್ನೂ ಅರ್ಥವತ್ತಾಗಿ ಸೂಚಿಸುವ ಅನುಭಾವಿಕ ವ್ಯಾಪ್ತಿಯನ್ನು ಈ ಪದಕ್ಕೆ ತಂದುಕೊಟ್ಟರು.

"ಅನುಭಾವವೆಂಬುದು ಅಂತರಂಗದ ರತ್ನ" "ಅನುಭಾವವೆಂಬುದು ಆತ್ಮವಿದ್ಯೆ" "ಅನುಭಾವವೆಂಬುದು ನಿಜನಿವಾಸದಲ್ಲಿರಿಸುವುದು" -ಎಂದು ಮುಂತಾಗಿ ಶರಣರು ಹೇಳುವ ಮಾತುಗಳಲ್ಲಿ ಇದರ ಅರ್ಥ ವಿಸ್ತಾರವನ್ನು ಕಂಡುಕೊಳ್ಳಬಹುದು. 'ಅನುಭಾವ' ಎಂಬ ಈ ಮಾತಿನಲ್ಲಿ ತಮ್ಮ ಆಧ್ಯಾತ್ಮಿಕ ಸಾಧನೆಯ ಸಾರ ಸರ್ವಸ್ವವನ್ನೂ ಶರಣರು ಅಡಕಗೊಳಿಸಿದರು. ತಮ್ಮ ಅರಿವಿನಿಂದ ಮತ್ತು ಅದರ ಆಚರಣೆಯಿಂದ ಪಡೆದ ಅನುಭವವನ್ನು ನಿರ್ದೇಶಿಸಲು ಈ ಮಾತನ್ನು ಅವರು ರೂಢಿಸಿಕೊಂಡರು. ಇದು 'ಬ್ರಹ್ಮ ಸಾಕ್ಷಾತ್ಕಾರ' 'ಬ್ರಹ್ಮಾನುಭೂತಿ'-ಅಥವಾ ಇಂಗ್ಲಿಷಿನಲ್ಲಿ ಮಿಸ್ಟಿಸಿಸಮ್ (Mysticism)- ಈ ಮೊದಲಾದ ಮಾತುಗಳ ಅರ್ಥವನ್ನು ಒಳಗೊಂಡಿದ್ದರೂ ಅವುಗಳಲ್ಲಿಲ್ಲದ ವಿಶಿಷ್ಟ ಅರ್ಥವೊಂದು ಇದರಲ್ಲಿ ಧ್ವನಿತವಾಗುವಂತೆ ಶರಣ ಸಾಧನೆ ಇದರ ಸುತ್ತ ಬೆಳೆಯಿತು.

'ಮಿಸ್ಟಿಸಿಸಮ್' ಎಂಬ ಮಾತನ್ನು ಕುರಿತೂ ಪಾಶ್ಚಾತ್ಯ ವಿದ್ವಾಂಸರಲ್ಲಿ ವಿಪುಲ

ಜಿಜ್ಞಾಸೆ ನಡೆದಿದೆ. ಕೆಲವು ವೇಳೆ ಇದನ್ನು ತೀರಾ ಪರಿಮಿತವಾದ ಅರ್ಥದಲ್ಲಿ ಪರಿಗಣಿಸಿರುವುದೂ ಉಂಟು. ಗೂಢವಾದುದು, ರಹಸ್ಯವಾದುದು, ಯೋಗ್ಯ ಕಾರಣಗಳಿಂದ ಸಮರ್ಥಿಸಲು ಅಸಾಧ್ಯವಾದುದು, ಕೇವಲ ಭಾವನಾತ್ಮಕವಾದುದು. ದೇವರನ್ನು ಕುರಿತು ಭ್ರಾಂತಿಮೂಲ ಅಭಿಪ್ರಾಯ, ಇಂದ್ರಜಾಲಿಕ ವಿದ್ಯೆ- ಮೊದಲಾದ ಅರ್ಥಗಳಲ್ಲಿ ಇದನ್ನು ಕಟ್ಟಿ ಹಾಕುವ ಪ್ರಯತ್ನಗಳೂ ನಡೆದಿವೆ. ಆದರೆ ಈ ಸಂಕುಚಿತ ಅರ್ಥಗಳನ್ನು ಮೀರಿ ಇದು ಊರ್ಧ್ವಮುಖವಾಗಿ ವಿಸ್ತಾರಗೊಂಡು ಶರಣರ 'ಅನುಭಾವ, ಎಂಬ ಪದಕ್ಕೆ ಸಂವಾದಿಯಾದ ಅರ್ಥವ್ಯಾಪ್ತಿಯನ್ನು ಪಡೆಯಬಲ್ಲುದಾಗಿದೆ. ಅನೇಕ ಪಾಶ್ಚಾತ್ಯ ತತ್ವಜ್ಞಾನಿಗಳು ಇದರ ಆಂತರಿಕ ಆಧ್ಯಾತ್ಮಿಕ ಸ್ವರೂಪವನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. ಅಂತಹ ಒಂದೆರಡು ಮಾತುಗಳನ್ನು ಇಲ್ಲಿ ನೋಡಬಹುದು.

"Mysticism is the immediate feeling of the unity of the self with god; it is nothing, therefore, but thd fundamental feeling of religion, the religious life at its very heart and centre."

ಎಂದು W. R. Inge ಅವರು ತಮ್ಮ "Mysticism in Religion" ಎಂಬ ಗ್ರಂಥದಲ್ಲಿ ಹೇಳುತ್ತಾರೆ. ಹಾಗೆಯೇ ಡಾ. ಆರ್. ಡಿ. ರಾನಡೆ ಅವರು "Mystricism in Maharastra" ಎಂಬ ಕೃತಿಯಲ್ಲಿ ಹೇಳುವ ಈ ಮಾತನ್ನು ಗಮನಿಸಬಹುದು:

"Mysticism denotes that altitude of mind which involves a direct, immediate, first hand intuitive apprehension of God.". ಈ ಮಾತುಗಳನ್ನು ನೋಡಿದಾಗ ಜೀವಾತ್ಮ ಮತ್ತು ಪರಮಾತ್ಮರ ಆತ್ಯಂತಿಕ ಸಂಬಂಧದ ಅಂತರನುಭವವೇ ಅನುಭಾವದ ಮೂಲಭೂತ ತಳಹದಿ ಎಂಬುದು ಸ್ಪಷ್ಟವಾಗುತ್ತದೆ.

ಆತ್ಮವು ಮೂಲತಃ ಚೈತನ್ಯಾತ್ಮಕವಾದುದು.; ಆನಂದರೂಪಿಯಾದುದು. ಆದರೆ ಅದು ದೇಹದ ಬಂಧನದಲ್ಲಿರುವವರೆಗೆ ಅದರ ಚೈತನ್ಯಾತ್ಮಕ ಶಕ್ತಿ, ಬೇರೆ ಬೇರೆ ಭೂಮಿಕೆಗಳಲ್ಲಿ, ಬೇರೆ ಬೇರೆ ಪ್ರಮಾಣದಲ್ಲಿ ಮೈದೋರುತ್ತದೆ. ಒಂದೇ ವಿದ್ಯುಚ್ಛಕ್ತಿಯು ಬೇರೆ ಬೇರೆ ಲೋಹಗಳ ತಂತಿಯಲ್ಲಿ ಹಾಯ್ದು ಹೋದಾಗ, ಶಾಖ ಬೆಳಕು ಮೊದಲಾದ ಬೇರೆ ಬೇರೆ ರೂಪಗಳನ್ನು ಧರಿಸುವಂತೆ, ಆತ್ಮಶಕ್ತಿ ದೇಹದ ಒಂದೊಂದು ಭೂಮಿಕೆಯಲ್ಲಿಯೂ ಬೇರೆ ಬೇರೆಯಾಗಿ ಕಾಣಿಸಿಕೊಳ್ಳುತ್ತದೆ. "ಈ ಸ್ಥೂಲ ದೇಹವೇ ನಾನು" ಎಂಬ ಅನ್ನಮಯದ ಸ್ಥಿತಿಯಿಂದ, ಪ್ರಾಣಮಯ ಮನೋಮಯ,



ವಿಜ್ಞಾನಮಯ ಕೋಶಗಳನ್ನೇರಿ, ಆನಂದಮಯ ಕೋಶಕ್ಕೆ ಬರುವವರೆಗೂ ವಿವಿಧ ಭೂಮಿಕೆಗಳಲ್ಲಿ ಆತ್ಮವು ವಿಕಾಸಗೊಳ್ಳುವುದನ್ನು ಕಾಣುತ್ತೇವೆ. ಆತ್ಮನ ಸಜ್ಜನ ಸಹಜ ಸ್ವರೂಪವಾದ ಈ ಆನಂದದ ನಿಲವನ್ನು ಕೈಗೂಡಿಸಿ ಕೊಡುವುದೇ ಅನುಭಾವದ ಕೊನೆಯ ಹಂತ.

ಅಂದರೆ, ಅಂತರಂಗದಲ್ಲಿರುವ ಶಕ್ತಿಗಳನ್ನು ಎಚ್ಚರಗೊಳಿಸಿ, ಆ ಎಚ್ಚರದಿಂದ ತೆರೆದ ಒಳಗಣ್ಣಿನಿಂದ ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿಕೊಳ್ಳುವುದನ್ನು "ಅನುಭಾವ" ಎಂದು ಹೇಳಬಹುದು. ಇದು ಕೇವಲ ಬುದ್ಧಿ ಮನಗಳಿಗೆ ನಿಲುಕದೆ ಅವುಗಳನ್ನು ದಾಟಿದ ಅಂತಃಸ್ಫುರಣದಿಂದ ಅನುಭೂತವಾಗುತ್ತದೆ. ಇದು ಇಂದ್ರಿಯ ದರ್ಶಿತ ಲೋಕಗಳಾಚೆಗೆ ವ್ಯಾಪಿಸುವ ಕಾಣ್ಕೆ. ಕೇವಲ ಬುದ್ಧಿ ತರ್ಕಗಳಿಂದ ಬಹಿರಿಂದ್ರಿಯದ ಅನುಭವಗಳಿಂದ ಸತ್ಯದ ಪೂರ್ಣ ಸ್ವರೂಪವನ್ನು ತಿಳಿಯಲಾಗುವುದಿಲ್ಲ. ಈ ಸೃಷ್ಟಿಯೊಂದು ನಿರಂತರ ಪ್ರವಾಹ, ನಮ್ಮ ಬುದ್ಧಿ ಆ ಪ್ರವಾಹದ ಒಂದು ಕ್ಷಣದ ಪ್ರತಿಯನ್ನು ತೆಗೆದುಕೊಂಡು ಅದರ ಸ್ವರೂಪವನ್ನು ಪೂರ್ಣ ಸ್ವರೂಪವನ್ನು ತಿಳಿಯಬೇಕಾದರೆ ಅದರ ಚಲನೆಯಲ್ಲಿಯೇ ಭಾಗವಹಿಸಿ ಅದನ್ನು ಕಂಡುಕೊಳ್ಳುವ ಶಕ್ತಿ ಬೇಕು. ಇಂಥ ಶಕ್ತಿಯು ಭಾವದೀಪ್ತವಾದ ಒಂದು ಮುಖ ಕಾವ್ಯ ಅಥವಾ ಸಾಹಿತ್ಯ. ಅದು ಸತ್ಯದ ಆವಿಷ್ಕಾರದ ಒಂದು ಮಾರ್ಗ. ಈ ಆವಿಷ್ಕಾರದ ಒಂದು ಮಾರ್ಗ. ಈ ಆವಿಷ್ಕಾರ ಇನ್ನೂ ತೀವ್ರವಾದಾಗ ಪ್ರವಾಹರೂಪವಾದ ಈ ಚಲನೆಯಲ್ಲಿಯೇ ಒಂದು ನಿಶ್ಚಲ ಸತ್ಯವನ್ನು ಸುಸ್ಪಷ್ಟವಾಗಿ ಕಾಣಲು ಸಮರ್ಥವಾಗುತ್ತದೆ. ಅಷ್ಟೇ ಅಲ್ಲದೆ ಆ ನಿಶ್ಚಲ ಸತ್ಯವೇ ತಾನಾಗಿ ಪರಿಣಮಿಸುವ ಪರಿವರ್ತನೆಯನ್ನು ಪಡೆಯುತ್ತದೆ. ಹೀಗೆ ತಾನೇ ಅದು ಆಗಿ ಪರಿಣಮಿಸುವ ಮಹಾ ಪರಿವರ್ತನೆಯೇ ಅನುಭಾವ.

ಈ ಅನುಭಾವ ಅದರ ಕೊನೆಯ ನಿಲವಿನಲ್ಲಿ ಅವರ್ಣನೀಯ. ಇದೇ ಅನುಭವಕ್ಕೂ ಅನುಭಾವಕ್ಕೂ ಇವರು ಅಂತರ. ಅನುಭವ ನನ್ನಿಂದ ಬೇರೆಯಾಗಿ ನಿಲ್ಲುವಂತಹದು ಬೆಂಕಿ ಸುಡುತ್ತದೆ. ಆ ಅನುಭವವನ್ನು ನಾನು ಪಡೆಯುತ್ತೇನೆ. ಅದರೆ ಒಂದು ಹಂತದಲ್ಲಿ ಆ ಅನುಭಾವ ಮತ್ತು ನಾನೂ ಅದಾಗಿ ಪರಿಣಮಿಸುತ್ತೇನೆ. ಇದೇ ಅನುಭಾವ ಅಲ್ಲಿ ಮಾತು ಮೌನವಾಗುತ್ತದೆ ರಾಮಕೃಷ್ಣ ಪರಮಹಂಸರು ಹೇಳುವಂತೆ ಉಪ್ಪಿನ ಬೊಂಬೆ ಸಮುದ್ರದ ಆಳವನ್ನು ನೋಡಲು ಹೋದಂತೆ ಆಗುತ್ತದೆ. ತಾನೇ ಅದರಲ್ಲಿ ಲೀನವಾಗಿ ಮಾತು ಮನಂಗಳಿಂದ ಅತ್ತತ್ತ ಇರುವ ಜ್ಯೋತಿಯಾಗಿ ಪರಿಣಮಿಸುತ್ತದೆ.

"ಮನೋಲಯವಾಗಿಪ್ಪ ನಿಜಲಿಂಗೈಕ್ಯವ ಅನುಭಾವವೆಲ್ಲವು ಜ್ಞಾನ ಶಬ್ದ ನೋಡಾ!" ಎಂದು ಅಲ್ಲಮಪ್ರಭು ಈ ನಿಲವನ್ನು ಹೇಳುತ್ತಾನೆ. ಆತನ ಇನ್ನೊಂದು ವಚನ ಇದರ ಸ್ವರೂಪವನ್ನು ಇನ್ನೂ ಅರ್ಥವತ್ತಾಗಿ ಹೀಗೆ ಹೇಳುತ್ತದೆ:

'ಕರ್ಪೂರದ ಗಿರಿಯನುರಿ ಹಿಡಿದ ಬಳಿಕ ಇದ್ದಿಲುಂಟೆ?
ಕೆಂಡದ ಗಿರಿಯು ಅರಗಿನ ಬಾಣವಲೆಚ್ಚಡೆ
ಮರಳಿ ಬಾಣವನರಸಲುಂಟೆ?
ಗುಹೇಶ್ವರ ಲಿಂಗವನರಿದಬಳಿಕ ದೇವರೆಂದು ಹರಸಲುಂಟೆ?

ತನ್ನನ್ನು ತಾನು ಅರಿತಮೇಲೆ ತಾನೆಂಬುದೂ ಅಲ್ಲಿ ಉಳಿಯದು. ಕರ್ಪೂರದ ಪರ್ವತವನ್ನು ಉರಿ ಕೊಂಡ ಹಾಗೆ ಉರಿಯು ಪರ್ವತಕ್ಕೆ ಅರಗಿನ ಬಾಣದಿಂದ ಹೊಡೆದ ಹಾಗೆ. ಉರಿಯುಂಡ ಕರ್ಪೂರದಂತೆ-ಎಂಬುದು ಶರಣರಿಗೆ ಬಹಳ ಪ್ರಿಯವಾದ ಸಾದೃಶ್ಯ, ಅನುಭಾವದ ಕೊನೆಯ ನಿಲುವನ್ನು ಇದು ತುಂಬಾ ಅರ್ಥವತ್ತಾಗಿ ಸೂಚಿಸುತ್ತದೆ. ಕೊನೆಯಲ್ಲಿ ಉರಿ ಮತ್ತು ಕರ್ಪೂರ ಎರಡೂ ಉಳಿಯದೆ ಬಯಲಿನಲ್ಲಿ ಲೀನವಾಗುತ್ತದೆ. ಇದನ್ನು ಹಾವಿನ ಹಾಳ ಕಲ್ಲಯ್ಯ ಒಂದು ಸುಂದರವಾದ ಪ್ರತಿಮೆಯ ಮೂಲಕ ಸೂಚಿಸುತ್ತಾನೆ. 'ಕರ್ಪೂರದ ಕಳ್ಳನ ಹುಲ್ಲಿನಲ್ಲಿ ಕಟ್ಟಿರಲು, ಅಗ್ನಿ ಎಂಬ ಹಿತವನು ಬಂದು ಬಿಡಿಸಲು, ಪಾಶ ಬೆಂದು ಕಳ್ಳ ತನ್ನಲ್ಲಿಯೇ ಅಡಗಿದನು"-ಎಂಬ ಈ ಮಾತು ಅನುಭಾವದ ಬೆಳವಣಿಗೆಯ ಚಿತ್ರವನ್ನು ಕಣ್ಣ ಮುಂದೆ ಕಟ್ಟುತ್ತದೆ. ಈ ಉರಿಯೂ ಹೊರಗಿನಿಂದ ಬರುವಂತಹುದಲ್ಲ; ಅಂತರಂಗದಲ್ಲಿಯೇ ಹುಟ್ಟಿ ಬೆಳೆಯುವಂತಹುದು.

"ಮರದೊಳಗಣ ಕಿಚ್ಚು ಮರನ ಸುಟ್ಟಂತಾದೆನಯ್ಯಾ;
ಬಯಲು ಗಾಳಿಯು ಪರಿಮಳ ನಾಸಿಕವನಪ್ಪಿದಂತಾದೆ ನಯ್ಯಾ!
ಕರುವಿನ ಬೊಂಬೆಯನುರಿ ಕೊಂಡಂತಾದೆನಯ್ಯಾ"
ಗುಹೇಶ್ವರ ಲಿಂಗವ ಪೂಜಿಸಿ ಭವಗೆಟ್ಟೆನಯ್ಯಾ"

ಎಂದು ಅಲ್ಲಮ ಪ್ರಭು ತನ್ನಲ್ಲಿರುವ ಚೈತನ್ಯ ಶಕ್ತಿಯೇ ಆವರಿಸಿ ತನ್ನಲ್ಲಿ ಲೀನಗೊಳಿಸಿಕೊಂಡಿತೆಂದು ಹೇಳುತ್ತಾನೆ. ಇದು ಬೆಳಕು ಕತ್ತಲೆಯನ್ನು ನುಂಗಿದಂತೆ ಎಂಬ ಮಾತು ಇನ್ನೊಂದು ಕಡೆ ಬರುತ್ತದೆ.

ಅನುಭಾವದ ಈ ನಿಲವನ್ನು ಶರಣರು ನೂರಾರು ಮಾತುಗಳಲ್ಲಿ ವ್ಯಕ್ತಪಡಿಸಿದ್ದಾರೆ.ಇದು ಮಾತಿಗೆ ಮೀರಿದುದೆಂಬುದನ್ನು ಒಪ್ಪಿದರೂ ಮಾತುಗಳಲ್ಲಿ ಅದನ್ನು ಹಿಡಿದಿಡುವ ಪ್ರಯತ್ನ ಅನಿವಾರ್ಯವಾಗುತ್ತದೆ ಸಾಧಕ ತನ್ನ ಸಾಕ್ಷಾತ್ಕಾರದ ಅನುಭಾವವನ್ನು ಮತ್ತು ಆ ಎಡೆಗೆ ನಡೆಯುವ ಮಾರ್ಗದರ್ಶನವನ್ನೂ ಇತರರಿಗೂ ಉಂಟು ಮಾಡಿಕೊಡಲು ಹವಣಿಸುತ್ತಾನೆ. ಆ ಮಾತುಗಳು ಅನುಭಾವದ ಪೂರ್ಣ ನಿಲವನ್ನು ವ್ಯಕ್ತಗೊಳಿಸಲಾರವಾದರೂ ಅವು ಸಾಧಕನಿಗೆ ತೋರ ಬೆರಳಾಗಿ ನಿಂತು ಮುನ್ನಡೆಸು ವಷ್ಟರಮಟ್ಟಿಗೆ ಜೀಂತವಾಗಿ ಚಿರಂತನವಾಗುತ್ತದೆ, ಅಲ್ಲದೆ "ಅನುಭಾವ ಮಾರ್ಗ"



"ಅನುಭಾವ ಸಾಹಿತ್ಯ" ಎಂದು ಮುಂತಾಗಿ ಹೇಳುವಾಗ 'ಅನುಭಾವ' ಎಂಬುದನ್ನು ಕೇವಲ ಆನಂದಮಯ ಸ್ಥಿತಿ' ಎಂಬ ಅರ್ಥದಲ್ಲಿ ಮಾತ್ರವೇ ತೆಗೆದುಕೊಳ್ಳದೆ ಅದರ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಬೇಕಾಗುತ್ತದೆ. ಅದು 'ಸಾಕ್ಷಾತ್ಕಾರದ ಕೊನೆಯ ಸ್ಥಿತಿ' ಮತ್ತು "ಅದನ್ನು ಪಡೆಯುವ ಮಾರ್ಗ" –ಎಂಬ ಎರಡು ಅಂಶಗಳನ್ನು ಒಳಗೊಳ್ಳಬೇಕಾಗುತ್ತದೆ. ಈ ಎರಡನೆಯ ಅರ್ಥದಲ್ಲಿ ಅನುಭಾವವನ್ನು ವಿವರಿಸ ಬೇಕಾದರೆ ಹೀಗೆ ಹೇಳಬಹುದು : ಬುದ್ಧಿ ತರ್ಕಗಳಿಗೆ ಅತೀತವಾದ ಒಂದು ಶಕ್ತಿಯಿಂದ ಮಾತ್ರ ಸತ್ಯ ಸಾಕ್ಷಾತ್ಕಾರವನ್ನು ಪಡೆಯುವುದು ಸಾಧ್ಯವೆಂಬ ತತ್ವವನ್ನು ತಳಹದಿಯಾಗಿಟ್ಟು-ಕೊಂಡು ಹೊರಟ ಮಾರ್ಗ.

ಹೀಗೆಂದೊಡನೆ ಇದು ತಪ್ಪು ಕಲ್ಪನೆಗೆ ಒಳಗಾಗುವ ಸಾಧ್ಯತೆಯಿದೆ. ಇದು ಬೌದ್ಧಿಕವಾದ ಯೋಗ್ಯ ಕಾರಣಗಳಿಂದ ಸಮರ್ಥನೀಯವಲ್ಲವೆಂದಾಗಲೀ, ಅಂಧ-ಶ್ರದ್ಧೆಯೇ ಇದರ ಆಶ್ರಯವೆಂದಾಗಲೀ ಭಾವಿಸಬಾರದು. ಇಲ್ಲಿ ಬೇಕಾದುದು ಅಂಧ ಶ್ರದ್ಧೆಯಲ್ಲ ಅದನ್ನು ಮೀರಿದ ಅಂತಃ ಕರಣದ ಅರಿವು. ಇದು ಭಾವನಾತ್ಮಕವಾದರೂ ಆ ಭಾವನೆ ಮನಸ್ಸಿನ ಉದ್ರೇಕದ ಹುಚ್ಚುಹೊಳೆಯಲ್ಲ. ವೈಚಾರಿಕ ಹಿನ್ನಲೆಯಲ್ಲಿ ಪ್ರೇಮದ ಬೆಳಕಿನಿಂದ ಸ್ಫೂರ್ತಗೊಂಡ ದಿವ್ಯವಾಹಿನಿ. ಅನುಭಾವ ವಿಚಾರ ಶಕ್ತಿ-ಯನ್ನು ಬಿಟ್ಟಿಲ್ಲ. ಅದರೆ ಈ ವಿಚಾರ ಶಕ್ತಿ ಕೇವಲ ಬೌದ್ಧಿಕ ಅಥವಾ ತಾರ್ಕಿಕ ಜ್ಞಾನಕ್ಕೆ ಸೀಮಿತವಾದುದಲ್ಲ. ಅರವಿಂದರು ಹೇಳುವಂತೆ ಬೌದ್ಧಿಕ ಶಕ್ತಿಯನ್ನು ಬಳಸಿಕೊಂಡು ಅದಕ್ಕೆ ಅತೀತವಾದ ಪ್ರಜ್ಞಾವಿಕಾಸದ ನಿಲವನ್ನು ಅನುಭಾವಿ ಪಡೆಯಬೇಕಾಗುತ್ತದೆ. ಇದನ್ನು ಅವರು "Supreme Reason" ಎಂದು ಕರೆದಿದ್ದಾರೆ. ಇದು ಬೌದ್ಧಿಕ ಜ್ಞಾನಕ್ಕೆ ವಿರೋಧವಾದುದಲ್ಲ; ಅದನ್ನು ಒಳಗೊಂಡು ಅದನ್ನು ಮೀರುವಂತಹುದು. ಇದು ನಮ್ಮ ಸಾಮಾನ್ಯ ಮರ್ತ್ಯಪ್ರಜ್ಞೆಯ ಪರಿಧಿಯನ್ನು ಹಿಗ್ಗಿಸುತ್ತದೆ; ಜೀವನದ ಅನಂತತೆಯನ್ನು ಕುರಿತು ಚರ್ಚಿಸುತ್ತದೆ. ಬಹುರೂಪ ವೈವಿಧ್ಯದ ಈ ಸೃಷ್ಟಿಯಲ್ಲಿ, ನಾಮರೂಪ ಕ್ರಿಯೆಗಳನ್ನು ಮೀರಿ ಏಕರೂಪವಾದ ಸೃಷ್ಟಿ ಶಕ್ತಿಯನ್ನು ಕಂಡುಕೊಳ್ಳುತ್ತದೆ. ಮಾನವನ ಜೀವನದ ಗುರಿಯನ್ನು ಇದು ನಿರ್ದೇಶಿಸುತ್ತದೆ; ಮತ್ತು ಆ ಗುರಿಯನ್ನು ಸೇರಿದ ಅನುಭವವನ್ನು ಸಾಕ್ಷಾತ್ತಾಗಿ ಕಂಡು ಕೊಳ್ಳಲು ಸಹಾಯಕವಾಗುತ್ತದೆ ಎಂದು ಮುಂತಾಗಿ ಈ ವೈಚಾರಿಕತೆಯ ಅನುಭಾವದ ಸ್ವರೂಪವನ್ನು ಅರವಿಂದರು ವಿವೇಚಿಸುತ್ತಾರೆ ತಮ್ಮ - The Life Divine" ಎಂಬ ಗ್ರಂಥದಲ್ಲಿ. ಹೀಗೆ ಬಹುರೂಪದಲ್ಲಿ ಏಕರೂಪವನ್ನು ಚಲನೆಯಲ್ಲಿ ನಿಶ್ಚಲತೆಯನ್ನೂ ಕಾಣುವ ಮತ್ತು ಅದರಲ್ಲಿ ತಾನೂ ಲೀನವಾಗುವುದನ್ನು ಕೈಗೂಡಿಸಿಕೊಡುವ ಮಾರ್ಗವನ್ನೂ ಅನುಭಾವ ಮಾರ್ಗವೆಂದು ಕರೆಯಬಹುದು.

ಜೀವನದ ಗುರಿಯನ್ನು ಕುರಿತು ಮನುಷ್ಯ ಆಲೋಚಿಸಲು ತೊಡಗಿದಂದಿ-

ನಿಂದಲೇ ಈ ಮಾರ್ಗದ ಅನ್ವೇಷಣೆ ಪ್ರಾರಂಭವಾಯಿತೆನ್ನಬಹುದು. ಸಾಧಕರ ನಿರಂತರ ಸಾಧನೆಯಿಂದ ಆ ಮಾರ್ಗ ಪೂರ್ಣತೆಯನ್ನು ಪಡೆಯಿತು. ಬೇರೆ ಬೇರೆ ಕಾಲಗಳಲ್ಲಿ ಈ ಪ್ರಯತ್ನ ನಡೆಯುತ್ತಾ ಬಂದಿದ್ದರೂ ಎಲ್ಲರೂ ಒಂದೇ ಗುರಿಯ ಕಡೆಗೆ ನಡೆದಿದ್ದಾರೆ. ಅವರ ಈ ಪ್ರಯತ್ನದ ಸ್ವರೂಪ ಹೊರನೋಟಕ್ಕೆ ಬೇರೆ ಬೇರೆ ರೀತಿಯ ಅನುಭವವನ್ನು ಪಡೆದಿರುವುದು ಕಂಡುಬರುತ್ತದೆ. 'ನದಿಗಳು ಬೇರೆ ಬೇರೆ ಪಾತ್ರಗಳಿಂದ ಹರಿದು ಬಂದರೂ ಕೊನೆಯಲ್ಲಿ ಅವು ಒಂದೇ ಸಮುದ್ರವನ್ನು ಸೇರುವಂತೆ'-ಎಂದು ಉಪನಿಷತ್ತು ಅರ್ಥವತ್ತಾದ ಸಾದೃಶ್ಯವನ್ನು ಕೊಡುತ್ತದೆ. ಬೇರೆ ಬೇರೆ ಕಣಿವೆಗಳಿಂದ ಅವರು ಬಂದರೂ ಏರಬೇಕಾಗಿರುವ ಶಿಖರ ಮಾತ್ರ ಒಂದೇ. ಆದುದರಿಂದಲೇ ಜಗತ್ತಿನ ಅನುಭಾವಿಗಳೆಲ್ಲರ ಮಾತಿನಲ್ಲಿ ಒಂದೇ ಸತ್ಯದ ಸೂತ್ರ ಗೋಚರವಾಗುತ್ತದೆ.

ಆದರೆ ಪ್ರಾರಂಭದ ದೆಸೆಯಲ್ಲಿಯೇ ಮಾರ್ಗಗಳು ಬೇರೆ ಬೇರೆಯಾಗಿ ಸಾಧಕ ಮುಂದುವರಿಯದೆ ಅಲ್ಲಿಯೇ ನಿಂತಾಗ ಭಿನ್ನತೆ ತೋರುವುದುಂಟು. ಅಲ್ಲದೆ ಪೂರ್ಣತೆಯನ್ನು ಪಡೆಯುವುದಕ್ಕಿಂತ ಮೊದಲಿನ ಪ್ರಾರಂಭದ ದೆಸೆಯಲ್ಲಿಯೇ ತಾನು ನೋಡಿದುದೇ ಪೂರ್ಣವೆಂಬ ಅಂಶದೃಷ್ಟಿ ಪ್ರಧಾನವಾದಾಗ ಈ ಭಿನ್ನತೆ ಇನ್ನೂ ಅಧಿಕವಾಗುತ್ತದೆ. ಅದು ಇನ್ನೂ ಸಂಕುಚಿತಗೊಂಡು ಮತೀಯ ಮಟ್ಟಕ್ಕೆ ಇಳಿದಾಗ ಹೋರಾಟಕ್ಕೂ ಕಾರಣವಾಗಬಹುದು. ಈ ಸಂಕುಚಿತಮತ ಧರ್ಮಗಳನ್ನು ದಾಟಿ ಅನುಭಾವ ಬೆಳೆಯುತ್ತದೆ. ಇದನ್ನು ಎಲ್ಲ ದೇಶಗಳ ಅನುಭಾವದ ಚರಿತ್ರೆಯಲ್ಲೂ ಕಾಣಬಹುದು.

ಭರತಖಂಡವನ್ನೇ ತೆಗೆದುಕೊಂಡರೆ ಇಲ್ಲಿ ವೇದಗಳು ಮೊಟ್ಟಮೊದಲನೆಯ ಅನುಭಾವ ಗ್ರಂಥಗಳೆನ್ನಬಹುದು. ವೇದಗಳ ಪ್ರಾರಂಭದಲ್ಲಿ ಕಾಣುವುದು ಅನೇಕ ಶಕ್ತಿಗಳ ಉಪಾಸನೆ. ಅಲ್ಲಿ ಪ್ರಕೃತಿಯ ಒಂದೊಂದು ಶಕ್ತಿಗೂ ದೈವತ್ವವನ್ನು ಕಲ್ಪಿಸಿ ಆರಾಧಿಸಿದರು. ವೇದಗಳಲ್ಲಿನ ಪ್ರಮುಖ ಅಂಶ ಯಜ್ಞಯಾಗಾದಿಗಳಿಗೆ ಸಂಬಂಧಿಸಿದುದು. ನಿಯಮ ಬದ್ಧವಾದ ರೀತಿಯಲ್ಲಿ ಯಜ್ಞಗಳನ್ನು ಆಚರಿಸುವುದರಿಂದ ಒಂದು ಬಗೆಯ ರಹಸ್ಯವಾದ ಅಲೌಕಿಕ ಶಕ್ತಿ ಲಭಿಸುತ್ತದೆ. ಇದರ ಸಹಾಯದಿಂದ ಇಹ ಪರಗಳೆರಡರಲ್ಲಿಯೂ ಸೌಖ್ಯವನ್ನು ಪಡೆಯಬಹುದು-ಎಂಬ ನಂಬುಗೆ ಇದರ ತಳಹದಿ. ಇದು ವೇದಗಳ ಕರ್ಮಕಾಂಡದ ಭಾಗ. ವೇದಗಳು ಅಪೌರುಷೇಯ, ಅಲ್ಲಿ ಹೇಳಿರುವ ಪ್ರತಿಯೊಂದು ಮಾತೂ ಸತ್ಯದ ಕೊನೆಯ ಸ್ವರೂಪ-ಎಂಬ ಅಚಲ ಶ್ರದ್ಧೆ ಅನೇಕ ವೇಳೆ ಬುದ್ಧಿಯ ವಿವೇಚನಾಶಕ್ತಿಯನ್ನೇ ಕುಗ್ಗಿಸಿದೆ; ಹೃದಯದ ಸಂವೇದನಾಶಕ್ತಿಯನ್ನೇ ಮೊಟಕುಗೊಳಿಸಿದೆ; ಅಂಧಶ್ರದ್ಧೆಯಿಂದ ಕರ್ಮಠ ಆಚರಣೆಗಳಲ್ಲಿ ತೊಡಗಿ ಅಲೌಕಿಕ ಶಕ್ತಿಗಳ ಮೊರೆಹೋಗುವಂತೆ ಮಾಡಿದೆ. ಇದನ್ನು ಶ್ರೀ ಎಸ್. ಎನ್ ದಾಸಗುಪ್ತ ಅವರು ತಮ್ಮ "Hindu Mysticism" ಎಂಬ ಗ್ರಂಥದಲ್ಲಿ ಆಧಾರ ಸಹಿತವಾಗಿ ವಿವೇಚಿಸಿದ್ದಾರೆ.



ಆರಣ್ಯಕಗಳನ್ನು ದಾಟಿ ಉಪನಿಷತ್ತುಗಳಿಗೆ ಬರುವವೇಳೆಗೆ ಅನುಭಾವ ದೃಷ್ಟಿ ಅರಳಿ ವಿಕಾಸಗೊಳ್ಳುತ್ತದೆ. ಉಪನಿಷತ್ತುಗಳು ಎಲ್ಲ ದೃಷ್ಟಿಯಿಂದಲೂ ಅನುಭಾವದ ಮೊಟ್ಟಮೊದಲನೆಯ ಗ್ರಂಥಗಳೆಂದು ಹೇಳಬಹುದು. ಯಜ್ಞಯಾಗಾದಿಗಳಿಂದ ಲಭಿಸುವ ಫಲ ಅತ್ಯಲ್ಪವಾದುದೆಂದೂ, ಶಾಶ್ವತವಾದ ಸುಖ ಸಾಧನೆಗೆ ಜ್ಞಾನಯಜ್ಞವೊಂದೇ ಸಾಧನವೆಂದೂ ಉಪನಿಷತ್ತುಗಳು ಸಾರಿದವು. ಮನಸ್ಸಿನ ಶಕ್ತಿಯನ್ನೂ ಅದರ ಮೇಲೆ ಪ್ರಭುತ್ವವನ್ನೂ ಪಡೆಯುವುದರಿಂದ ಉಂಟಾಗುವ ಅದ್ಭುತ ಪರಿವರ್ತನೆಯನ್ನೂ ಮೊಟ್ಟಮೊದಲ ಬಾರಿಗೆ ಉಪನಿಷತ್ತಿನ ಋಷಿಗಳು ಕಂಡುಕೊಂಡರು. ಮನುಷ್ಯ ದೀನನಾಗಿ, ಕುರುಡು ನಂಬಿಕೆಯಿಂದ ಅಲೌಕಿಕ ಶಕ್ತಿಯನ್ನು ಆಶ್ರಯಿಸಬೇಕಾಗಿಲ್ಲ. ಆ ಶಕ್ತಿಯ ಪ್ರತ್ಯಕ್ಷ ದರ್ಶನವನ್ನು ಸಾಕ್ಷಾತ್ತಾಗಿ ಪಡೆಯಬಹುದು; ಪಡೆಯಬೇಕು. ಏಕೆಂದರೆ ಎಲ್ಲರೂ ಆ ಅಮೃತ ಶಕ್ತಿಯ ಪುತ್ರರೆಂದು ಉಪನಿಷತ್ತು ಘೋಷಿಸಿತ್ತು.

ಉಪನಿಷತ್ತಿನಲ್ಲಿ ಋಷಿಗಳ ಮನಸ್ಸು ಅಂತರ್ಮುಖವಾಗಿ ಸತ್ಯಶೋಧನೆಯಲ್ಲಿ ತೊಡಗಿದುದನ್ನು ಕಾಣುತ್ತೇವೆ. ಕೇನೋಪನಿಷತ್ತು "ಓಂ ಕೇನೇಷಿತಂ ಪತತಿ, ಪ್ರೇಷಿತಂ ಮನಃ" ಎಂದು ಮುಂತಾಗಿ ನಮ್ಮ ದೇಹದಲ್ಲಿರುವ ಪ್ರತಿಯೊಂದು ಚಲನವಲನಕ್ಕೂ ಕಾರಣವಾಗಿರ ಬಹುದಾದ ಶಕ್ತಿಯ ಸ್ವರೂಪವೇನೆಂಬ ಪ್ರಶ್ನೆಯನ್ನು ಎತ್ತಿಕೊಳ್ಳುತ್ತದೆ. ಈ ಮೂಲಭೂತವಾದ ಸಮಸ್ಯೆಗಳ ವಿವೇಚನೆಯಲ್ಲಿ ತೊಡಗಿ, ಅಂತರ್ಮುಖವಾದ ತಮ್ಮ ಸಾಧನೆಯಲ್ಲಿ ಮುಂದುವರಿದು "ಅಣುವಿಗಿಂತಲೂ ಅಣು, ಮಹತ್ತಿಗಿಂತಲೂ ಮಹತ್ತಾದ ಆತ್ಮವು ಪ್ರಾಣಿಗಳ ಹೃದಯ ಗುಹೆಯಲ್ಲಿದೆ" ಎಂಬುದನ್ನೂ ಮತ್ತು ಈ ಆತ್ಮದಲ್ಲಿಯೇ ಸರ್ವ ಭೂತಾಂತರಾತ್ಮನಾದ ಪರಮಾತ್ಮನನ್ನು ಕಾಣಬೇಕೆಂಬುದನ್ನು ಕಂಡುಕೊಂಡರು. "ಒಂದೇ ರೂಪವನ್ನು ನಾನಾ ರೂಪವಾಗಿ ಪ್ರಕಟಮಾಡುವ ಆ ಪರಮಾತ್ಮನನ್ನು ಯಾರು ತಮ್ಮ ಆತ್ಮದಲ್ಲಿ ನೋಡುವರೋ, ತವರಿಗೆ ಅಕ್ಷಯ ಸುಖ ದೊರೆಯುವುದು. ಇತರರಿಗೆ ದೊರೆಯಲಾರದು;" ಎಂದು ಋಷಿಗಳು ಹೇಳುವಾಗ ಈ ದೃಷ್ಟಿಯನ್ನು ಸ್ಪಷ್ಟವಾಗಿ ಕಾಣುತ್ತೇವೆ. ಸರ್ವಭೂತಗಳ ಅಂತರ್ಯದಲ್ಲಿರುವ ಆ ಚೈತನ್ಯ ಶಕ್ತಿ ಒಂದೇ. ಅದೇ ನಾನಾ ರೂಪಗಳನ್ನು ಧರಿಸಿ ಎಲ್ಲೆಲ್ಲೂ ವ್ಯಾಪಿಸಿದೆ. ಆ ಶಕ್ತಿಯನ್ನು ಸಾಕ್ಷಾತ್ಕರಿಸಿ ಕೊಂಡಾಗಲೇ ಅಕ್ಷಯ ಸುಖ ದೊರೆಯುವುದು. ಈ ಪ್ರತ್ಯಕ್ಷ ಸಾಕ್ಷಾತ್ಕಾರವೇ ಜೀವನದ ಕೊನೆಯ ಗುರಿ,-ಎಂದು ಉಪನಿಷತ್ತುಗಳು ಅನೇಕ ಬಗೆಯಲ್ಲಿ ಒತ್ತಿ ಹೇಳುತ್ತವೆ.

ಆ ಕೊನೆಯ ಗುರಿಯನ್ನು ಸಾಧಿಸುವುದು ಹೇಗೆ? ಶರೀರಗಳಲ್ಲಿ ಅಶರೀರನಾಗಿ, ಅನಿತ್ಯಗಳಲ್ಲಿ ನಿತ್ಯನಾಗಿ, ಸರ್ವವ್ಯಾಪಿಯಾಗಿರುವ ಈ ಆತ್ಮನ ಸಾಕ್ಷಾತ್ಕಾರವಾಗುವುದೆಂತು? ಇಲ್ಲಿಯೂ ಋಷಿಗಳು ಒಂದು ಎಚ್ಚರಿಕೆಯನ್ನು ಕೊಡುತ್ತಾರೆ. "ನಾಯ-

ಮಾತ್ಮಾಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ" ಅಂದರೆ ಆತ್ಮನು ಕೇವಲ ಪ್ರವಚನದಿಂದ ಮೇಧಾಶಕ್ತಿಯಿಂದ ಬಹಳ ಶ್ರವಣದಿಂದ ಲಭ್ಯನಲ್ಲ. ಇವೆಲ್ಲವುಗಳನ್ನು ದಾಟಿ ಮುಂದೆ ನಡೆಯಬೇಕು. ಇವುಗಳಿಗೆ ಅತೀತವಾದ ಆ ಒಳ-ಗಣ್ಣು ಪರಮಾತ್ಮನ ಕೃಪೆಯಿಂದಲೇ ತೆರೆಯುತ್ತದೆ. ಆಗ ಆತ್ಮನ ನಿಜಸ್ವರೂಪ ಪ್ರಕಟವಾಗುತ್ತದೆ. ಹೀಗೆ ಆತ್ಮ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಾಣಲು ಋಷಿಗಳು ಕಾತರಗೊಂಡರು :

"ಹಿರಣ್ಮಯೇನ ಪಾತ್ರೇಣ ಸತ್ಯಸಾಪಿಹಿತಂ ಮುಖಂ
ತತ್ತ್ವಂ ಪೂಷನ್ನ ಪಾವೃಣು ಸತ್ಯ ಧರ್ಮಾಯ ದೃಷ್ಟಯೇ"

ಎಂಬ ಈಶೋಪನಿಷತ್ತಿನ ಮಾತು ಮನನೀಯವಾಗಿದೆ. "ಸತ್ಯದ ಮುಖ ಚಿನ್ನದ ಮುಚ್ಚಳದಿಂದ ಮುಚ್ಚಿದೆ. ಓ ಜ್ಞಾನಸೂರ್ಯನೇ ಆ ಚಿನ್ನದ ಮುಚ್ಚಳವನ್ನು ತೆಗೆದು ಸತ್ಯದ ಪ್ರತ್ಯಕ್ಷ ದರ್ಶನವನ್ನು ಮಾಡಿಸು"-ಎಂದು ಋಷಿಗಳು ಇಲ್ಲಿ ಬೇಡಿಕೊಳ್ಳುತ್ತಾರೆ. ಅನುಭಾವಿಯ ದೃಷ್ಟಿಯೇನೆಂಬುದು ಇಲ್ಲಿ ಅರ್ಥವತ್ತಾಗಿ ಪ್ರತಿಪಾದಿತವಾಗಿದೆ. ಚಿನ್ನದ ಮುಚ್ಚಳವನ್ನು ತೆಗೆದು ಸತ್ಯದ ಪ್ರತ್ಯಕ್ಷ ದರ್ಶನವನ್ನು ಪಡೆಯುವುದೇ ಅನುಭಾವ. ಋಷಿಗಳು ಸತ್ಯವನ್ನು ಹಾಗೆ ಸಾಕ್ಷಾತ್ತಾಗಿ ಕಂಡರು; ದ್ರಷ್ಟಾರರಾದರು. ತಾವು ಕಂಡ ಸತ್ಯವನ್ನು ಇತರರೂ ಕಾಣುವ ಮಾರ್ಗವನ್ನು ಉಪನಿಷತ್ತುಗಳಲ್ಲಿ ಬೋಧಿಸಿದರು.

ಉಪನಿಷತ್ತುಗಳ ನಂತರ ಅವುಗಳ ಸಾರವನ್ನು ಒಳಗೊಂಡ ಭಗವದ್ಗೀತೆ ಅನುಭಾವ ದೃಷ್ಟಿಯಿಂದ ಅತಿ ಮುಖ್ಯವಾದ ಗ್ರಂಥ. ಜೀವನದ ಹೋರಾಟದಲ್ಲಿ ತೊಡಗಿದ್ದರೂ ಆ ಬಂಧನಕ್ಕೆ ಅಂಟದೆ ಆತ್ಮನಿಂದ ಆತ್ಮನಲ್ಲಿಯೇ ಸಂತುಷ್ಟನಾಗುವ ಸ್ಥಿತಿಯನ್ನು ಇದು ವರ್ಣಿಸುತ್ತದೆ. ಮತ್ತು ಸ್ಥಿತಪ್ರಜ್ಞನ ಆ ಬ್ರಾಹ್ಮೀಸ್ಥಿತಿಯನ್ನು ಸಾಧಿಸಲು ಬೇಕಾದ ಯೋಗಸಮನ್ವಯದ ಮಾರ್ಗವನ್ನು ನಿರೂಪಿಸುತ್ತದೆ. ಅಲ್ಲದೆ ತತ್ವಜಿಜ್ಞಾಸೆ ಸಾರ್ಥಕವಾಗ ಬೇಕಾದರೆ ಅದು ಬುದ್ಧಿಯನ್ನಷ್ಟೇ ತೃಪ್ತಿಪಡಿಸಿದರೆ ಸಾಲದು; ಹೃದಯವನ್ನರಳಿಸುವ ಅನುಭಾವವಾಗಬೇಕು ಎಂಬ ತತ್ವವನ್ನು ಪ್ರತಿಪಾದಿಸುತ್ತದೆ. ಕೃಷ್ಣನ ಉಪದೇಶವೆಲ್ಲಾ ಸಾರ್ಥಕವಾಗಿ ಅರ್ಜುನ ಕಾರ್ಯೋನ್ಮುಖನಾಗಬೇಕಾದರೆ ಅವನಿಗೆ ದಿವ್ಯದೃಷ್ಟಿಯನ್ನು ಕೊಡಬೇಕಾಯಿತು. ಆ ದಿವ್ಯದೃಷ್ಟಿಯಿಂದ ಅರ್ಜುನ ವಿಶ್ವರೂಪವನ್ನು ಕಂಡುಕೊಳ್ಳುತ್ತಾನೆ ಆ ದಿವ್ಯದೃಷ್ಟಿಯೇ ಅನುಭಾವಿಗೆ ಬೇಕಾದ ಒಳಗಣ್ಣು; ಸತ್ಯಸ್ವರೂಪ ಸಾಕ್ಷಾತ್ಕಾರವೇ ವಿಶ್ವರೂಪದರ್ಶನ. ಸತ್ಯದ ಸಾಕ್ಷಾತ್ಕಾರಕ್ಕೆ ಅಂತರ್ ದೃಷ್ಟಿ ಬೇಕೆಂಬುದನ್ನು ಗೀತೆ 'ಪ್ರತಿಮಾ' ರೂಪದಿಂದ ಪ್ರತಿಪಾದಿಸುತ್ತದೆ.



ಉಪನಿಷತ್ತುಗಳು ಮತ್ತು ಭಗವದ್ಗೀತೆ ಹಾಕಿಕೊಟ್ಟ ಈ ಆದರ್ಶವೇ ಮುಂದೆ ಶಾಖೋಪಶಾಖೆಗಳಾಗಿ ಬೆಳೆಯಿತು. ಆಗಮ ಪುರಾಣಗಳಲ್ಲಿ, ಇತಿಹಾಸ ಮಹಾ ಕಾವ್ಯಗಳಲ್ಲಿ, ಅದರ ಒಂದೊಂದು ರೂಪವನ್ನು ಗುರುತಿಸಬಹುದು. ಭರತಖಂಡದ ವಿವಿಧ ಭಾಗಗಳಲ್ಲಿ ಕಾಲಕಾಲಕ್ಕೆ ಆಗಿ ಹೋದ ಸಾಧಕರುಗಳ ಜೀವನದಲ್ಲಿಯೂ ಇದೇ ಆದರ್ಶದ ಪುನರಾವತಾರವನ್ನು ಕಾಣುತ್ತೇವೆ. ಅಷ್ಟೇ ಅಲ್ಲದೆ ನಿಜವಾದ ಗುರಿಯನ್ನು ಸಾಧಿಸಿದ ಜಗತ್ತಿನ ಎಲ್ಲ ಸಾಧಕರ ಮುಂದಿದ್ದ ಆದರ್ಶವೂ ಇದೇ. ಹೊರ ನೋಟಕ್ಕೆ ಅವರ ಸಾಧನೆಯಲ್ಲಿ ವಿಭಿನ್ನತೆ ಕಂಡು ಬರಬಹುದಾದರೂ ಎಲ್ಲ ಸಾಧಕರ ಮುಂದಿದ್ದ ಸಮಸ್ಯೆ ಒಂದೇ. ಈ ದೇಹದಲ್ಲಿ ಬಂಧಿತವಾದ ಜೀವಾತ್ಮ ಮತ್ತು ಈ ವಿಶ್ವವನ್ನೆಲ್ಲಾ ವ್ಯಾಪಿಸಿರುವ ವಿಶ್ವಾತ್ಮ ಇವುಗಳ ಮಧ್ಯದಲ್ಲಿರುವ ಅಡ್ಡಿಗಳನ್ನು ತೊಡೆದು ಹಾಕಿ ಸಮರಸಗೊಳಿಸುವುದು ಹೇಗೆ?—ಎಂಬುದೇ ಆ ಪ್ರಶ್ನೆ. ಜಗತ್ತಿನ ಎಲ್ಲ ಧರ್ಮಗಳ ಮೂಲಭೂತವಾದ ತಳಹದಿ ಇದೇ. ಈ ಪ್ರಶ್ನೆಯನ್ನು ಎದುರಿಸಿ ಸಾಮರಸ್ಯವನ್ನು ಸಾಧಿಸುವ ಮಾರ್ಗದಲ್ಲಿ ನಡೆದು, ಅದನ್ನು ಸಾಕ್ಷಾತ್ತಾಗಿ ಅರಿತು ಅನುಭವಿಸಿದಾಗ ಅದೇ ಅನುಭಾವವಾಗುತ್ತದೆ.

ಇವನ್ನು ಸಾಧಿಸಲು ಒಂದೊಂದು ಜನಾಂಗವೂ ಅದರದರ ಆದರ್ಶಗಳಿಗೆ ತಕ್ಕಂತೆ; ಒಬ್ಬೊಬ್ಬ ಸಾಧಕನೂ ತನ್ನ ತನ್ನ ಮನೋಧರ್ಮ ಶಕ್ತಿಸಂಸ್ಕಾರಗಳಿಗೆ ಅನುಗುಣವಾಗಿ, ಬೇರೆ ಬೇರೆ ಮಾರ್ಗಗಳನ್ನು ಅವಲಂಬಿಸಿದಂತೆ ಕಾಣಬಹುದು. ಆದರೆ ಅನುಭಾವದ ತಿರುಳು ಮಾತ್ರ ಒಂದೇ. ಹಿಂದೂ, ಕ್ರಿಶ್ಚಿಯನ್, ಇಸ್ಲಾಂ...ಈ ಮೊದಲಾದ ಎಲ್ಲ ಧರ್ಮಗಳಲ್ಲಿಯೂ ತೋರಿಕೆಯ ಭೇದವೇನೇ ಇದ್ದರೂ ಅನುಭಾವ ಪಂಥದ ಕೊನೆಯಲ್ಲಿ ಎಲ್ಲವೂ ಏಕರೂಪವಾಗಿ ಕೊನೆಗೊಳ್ಳುತ್ತವೆ. ಅನುಭಾವಿಗಳಿಗೆ ಕಾಲ ದೇಶಗಳಿಲ್ಲ ಎಂದು ವಿಲಿಯಂ ಜೇಮ್ಸ್ ಹೇಳಿರುವುದು ಈ ಅರ್ಥದಲ್ಲಿಯೇ.

ಹೀಗೆ ಅನುಭಾವ ತನ್ನ ಕೊನೆಯ ಮಟ್ಟದಲ್ಲಿ ಕಾಲ ದೇಶಗಳ ಮೇರೆಯನ್ನು ಮೀರಿದ್ದರೂ ಅದನ್ನು ಜೀವನದಲ್ಲಿ ಅಳವಡಿಸಿಕೊಂಡು ಸಾಧಿಸಿ ತೋರಿಸಿದ ಸಾಧಕರು ಕಾಲ ದೇಶಗಳ ಮಿತಿಯಲ್ಲಿ ಬಾಳಬೇಕಾಗಿದ್ದ ಸಮಾಜ ಜೀವಿಗಳು. ಅದ್ದರಿಂದ ಆಯಾ ಕಾಲದ ಆಯಾ ಸಮಾಜದ ಪ್ರಭಾವ ಅವರ ಸಾಧನೆಯ ಮೇಲೂ ಆಗುವುದು ಅನಿವಾರ್ಯ ಮತ್ತು ವ್ಯಕ್ತಿ ವಿಶಿಷ್ಟವಾದ ಸ್ವಭಾವ ಸಂಸ್ಕಾರಗಳೂ, ಹಿನ್ನೆಲೆಯಾಗಿಟ್ಟುಕೊಂಡ ಧಾರ್ಮಿಕ ತತ್ವಜಿಜ್ಞಾಸೆಯ ಸ್ವರೂಪವೂ ಅನುಭಾವ ಮಾರ್ಗದ ಮೇಲೆ ಪ್ರಭಾವವನ್ನು ಬೀರುತ್ತವೆ. ಭರತಖಂಡವನ್ನೇ ತೆಗೆದುಕೊಂಡರೂ ದಕ್ಷಿಣದಲ್ಲಿ ಆಳ್ವಾರರೂ ನಾಯನಾರರೂ, ಶರಣರು ದಾಸರು; ಮಹಾರಾಷ್ಟ್ರದ ಸಂತರು, ಉತ್ತರದ ಕಬೀರ್' ಮತ್ತು ಇತರರು, ಬಂಗಾಳದ ಚೈತನ್ಯ ಇವರೆಲ್ಲರಲ್ಲೂ ವ್ಯಕ್ತಿ, ಕಾಲ' ವಿಶಿಷ್ಟವಾದ ವಿಭೇದಗಳನ್ನು ಕಾಣುತ್ತೇವೆ. ಆದರೆ ಈ ಭೇದಗಳು ಪರಸ್ಪರ ವಿರೋಧಿ

ಗಳಲ್ಲ, ಪೂರಕಗಳು. ಇವೆಲ್ಲವುಗಳಿಂದ ಭಾರತೀಯ ಅನುಭಾವ ಶ್ರೀಮಂತವಾಗಿದೆ. ಇದರಲ್ಲಿ ಶಿವಶರಣರ ಅನುಭಾವ ಮಾರ್ಗವೂ ವಿಶಿಷ್ಟವಾದ ಅಮೂಲ್ಯ ರತ್ನ ಭಂಡಾರ ಇತರ ಎಲ್ಲ ರತ್ನಗಳ ಕಾಂತಿಯನ್ನು ಇದು ಒಳಗೊಂಡು ಸ್ವಯಂಪೂರ್ಣ ಪ್ರಭೆಯನ್ನು ಪಡೆದಿರುವುದೇ ಇದರ ವೈಶಿಷ್ಟ್ಯ.

ಶರಣರ ಅನುಭಾವ ಮಾರ್ಗ ಭಕ್ತಿಸ್ಥಲದಿಂದ ಐಕ್ಯಸ್ಥಲದವರೆಗೆ ಆರು ಮೆಟ್ಟಲುಗಳಲ್ಲಿ ಪೂರ್ಣಗೊಂಡು ಮಾನವತೆಯು ಏರಬಹುದಾದ ಕೊನೆಯ ಎತ್ತರವನ್ನು ತೋರಿಸುತ್ತದೆ. ಶರಣರು ಪೂರ್ಣದೃಷ್ಟಿಯಿಂದ ಜೀವನವನ್ನು ನೋಡಿದವರು. ವ್ಯಕ್ತಿಯು ಸಮಾಜದಲ್ಲಿ ಬಾಳಬೇಕಾದವನು, ಮತ್ತು ವೈಯಕ್ತಿಕ ಉದ್ಧಾರವನ್ನೂ ಕಂಡುಕೊಳ್ಳಬೇಕಾದವನು, ಆತ ಸಮಷ್ಟಿಜೀವಿ ಮತ್ತು ವ್ಯಷ್ಟಿ ಜೀವಿ ಎರಡೂ ಹೌದು. ಇವೆರಡೂ ಪರಸ್ಪರ ವಿರುದ್ಧವಲ್ಲ, ಒಂದನ್ನೊಂದು ಪೂರ್ಣಗೊಳಿಸಬೇಕಾದುವು ಆದರೆ ಅಧ್ಯಾತ್ಮವು ಸಮಾಜವನ್ನೂ, ಸಮಾಜವು ಅಧ್ಯಾತ್ಮವನ್ನೂ ಒಂದನ್ನೊಂದು ತಿರಸ್ಕಾರದ ದೃಷ್ಟಿಯಿಂದ ನೋಡುತ್ತಿದ್ದ ಕಾಲವೂ ಒಂದಿತ್ತು. ಅದು ನಮ್ಮ ಅಧಃಪತನದ ಕಾಲ, ಧರ್ಮದ ಹೆಸರಿನಿಂದ ಮೇಲು ಕೀಳುಗಳನ್ನೂ ಶೋಷಣೆಯ ಸಾಧನಗಳನ್ನೂ ಸೃಷ್ಟಿಸಿಕೊಂಡ ಕಾಲ. ಇಂತಹ ಸಂದರ್ಭದಲ್ಲಿ ಶರಣರು ತಮ್ಮ ಪೂರ್ಣ ದೃಷ್ಟಿಯಿಂದ ಪೂರ್ಣ ಜೀವನದಿಂದ ಈ ಅಂತರವನ್ನು ತೊಡೆದು ಹಾಕಿದರು. ಇಹಪರಗಳೆರಡನ್ನೂ ಸಮರಸಗೊಳಿಸಬಲ್ಲ ಮಾರ್ಗವನ್ನು ರೂಢಿಸಿದರು. "ಇದ್ದು ಬದ್ಧನಲ್ಲದ' ಸುಳಿದು ಸೂತಕಿಯಲ್ಲದ" ರೀತಿಯಲ್ಲಿ ಬಾಳುವ ರಹಸ್ಯವನ್ನು ಶರಣರ ಅನುಭಾವ ಮಾರ್ಗದಲ್ಲಿ ಸ್ಪಷ್ಟವಾಗಿ ಕಾಣುತ್ತೇವೆ.

ಶರಣರ ಷಟ್‌ಸ್ಥಲ ಮಾರ್ಗ ಮತ್ತು ಆ ತಳಹದಿಯ ಮೇಲೆ ರೂಪುಗೊಂಡ ಶಿವಯೋಗ ಸರ್ವಸಂಗಪರಿತ್ಯಾಗಿಯ ಏಕಾಂತ ಜೀವನದ ಮಾರ್ಗವಲ್ಲ. ಸರ್ವಸಂಗದಲ್ಲಿದ್ದೂ ನಿಸ್ಸಂಗವನ್ನು ಸಾಧಿಸಿದ ಸಮನ್ವಯ ಯೋಗ. ಇಲ್ಲಿ ಯೋಗವು ಕ್ರಿಯೆ ಮತ್ತು ಜ್ಞಾನಗಳೆರಡನ್ನೂ ಸೇರಿಸುವ ಕೊಂಡಿಯಾಗಿ ಪರಿಣಮಿಸಿತು. "ಆರುವನೊಲ್ಲೆನೆಂದು ಅರಣ್ಯಕ್ಕೆ ಹೋಗುವುದು ಮರುಳತನ, ಊರೊಳಿದ್ದೊಡೆ ನರರ ಹಂಗು-ಅರಣ್ಯದೊಳಗಿದ್ದೊಡೆ ತರುಗಳ ಹಂಗು-ಬಂದ ಪದಾರ್ಥವ ಲಿಂಗಾರ್ಪಿತ ಮಾಡಿ ಕೊಂಬ ಶರಣನೇ ಜಾಣ ಸಕಳೇಶ್ವರಾ" ಎಂದು ಹೇಳಿದ ಶರಣರು ಈ ಪ್ರಪಂಚದಲ್ಲಿಯೇ ಇದ್ದು, "ಬೇಕೆನ್ನದೆ ಬೇಡೆನ್ನದೆ" "ಬಂದ ಸುಖವನತಿಗಳೆಯದೆ" "ಉಂಡು ಉಪವಾಸಿಗಳು, ಬಳಸಿ ಬ್ರಹ್ಮಚಾರಿಗಳು" ಆಗಿ ಸಾಧನೆಯನ್ನು ಮಾಡಿದರು.



ಈ ಸಮನ್ವಯವೇ ಅನುಭಾವ ಮಾರ್ಗವು ಸಾಧಿಸಬಹುದಾದ ಮಹತ್ತರವಾದ ಸಿದ್ಧಿ. ಇದನ್ನು ಸಾಮೂಹಿಕವಾದ ಆಚರಣೆಯಿಂದ ಸಾಧಿಸಿ ತೋರಿಸಿದುದೇ ಶರಣರ ಅನುಭಾವ ಮಾರ್ಗದ ವೈಶಿಷ್ಟ್ಯ. ಶರಣರ 'ಅನುಭಾವ' ಎಂಬ ಮಾತು ಇದನ್ನೇ ಸೂಚಿಸುತ್ತದೆ ಅದು ಬ್ರಹ್ಮ ಸಾಕ್ಷಾತ್ಕಾರ, ಬ್ರಹ್ಮಾನುಭೂತಿ, Mystic experience ಈ ಮೊದಲಾದ ಅರ್ಥವನ್ನೊಳಗೊಂಡಿದ್ದರೂ ಆ ಮಾತುಗಳಲ್ಲಿಲ್ಲದ ಒಂದು ವಿಶಿಷ್ಟವಾದ ಅರ್ಥ ಈ 'ಅನುಭಾವ' ಎಂಬ ಮಾತಿನಲ್ಲ ಸ್ಫುರಿಸುತ್ತದೆ. ಅದಾವುದೆಂದರೆ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯಲು ಈ ಪ್ರಪಂಚವನ್ನೇ ಒಂದು ಸಾಧನವನ್ನಾಗಿ ಬಳಸುವ ಮಾರ್ಗವೇ ಅನುಭಾವ ಮಾರ್ಗ–ಎಂಬುದು.

ಮಹಾರಾಷ್ಟ್ರದ ಅನುಭಾವಿಗಳಲ್ಲಿ ನಾಮದೇವನ ಯುಗವನ್ನು ಕುರಿತು ವಿಮರ್ಶಿಸುತ್ತ Mysticism in 'Maharastra'–ಎಂಬ ತಮ್ಮ ಗ್ರಂಥದಲ್ಲಿ ಪ್ರೊ. ರಾನಡೆಯವರು ಒಂದು ಮಾತನ್ನು ಹೇಳುತ್ತಾರೆ. ಆ ಯುಗದಲ್ಲಿ ಚಿಪ್ಪಿಗ ಹಡಪಿಗ ಅಕ್ಕಸಾಲಿಗ ಮೊದಲಾದ ಉದ್ಯೋಗಗಳಲ್ಲಿದ್ದವರೆಲ್ಲರೂ ಸಾಧಕರಾದುದು ಕಂಡು ಬರುತ್ತದೆ. ಆದರೆ ಅವರು ಮಾರ್ಗವನ್ನು ಕೈ ಕೊಂಡ ಮೇಲೂ ಮೊದಲಿನ ಉದ್ಯೋಗಗಳಲ್ಲಿಯೇ ಮುಂದುವರಿಯುವುದು ಸಾಧ್ಯವಾಗಲಿಲ್ಲ-ಎನ್ನುತ್ತಾರೆ ರಾನಡೆ ಅವರು. ಇದು ಶರಣರಲ್ಲಿ ಸಂಪೂರ್ಣವಾಗಿ ಸಾಧ್ಯವಾಗಿರುವುದನ್ನು ಕಾಣುತ್ತೇವೆ. ಮಡಿವಾಳ ಮಾಚಯ್ಯ, ಸೋಳಿಗೆ ಮಾರಯ್ಯ, ನುಲಿಯ ಚಂದಯ್ಯ, ಆಯ್ದಕ್ಕಿ ಮಾರಯ್ಯ. ಭಂಡಾರಿ ಶಾಂತಯ್ಯ,' ಪಾಕದ ಭೀಮಯ್ಯ, ವೈದ್ಯ ಸಂಗಣ್ಣ ಮೇದಾರ ಕೇತಯ್ಯ, ತುರುಗಾಹಿ ರಾಮಣ್ಣ-ಈ ಮೊದಲಾದ ನೂರಾರು ಶರಣರು ಕೊನೆಯವರೆಗೂ ತಮ್ಮ ಕಾಯಕವನ್ನು ಮಾಡುತ್ತಲೇ ಶಿವಯೋಗವನ್ನು ಸಾಧಿಸಿದವರು. ತಾವು ಕೈಕೊಂಡ ಅನುಭಾವ ಮಾರ್ಗದಲ್ಲಿ ಕಾಯಕವನ್ನು ಬಿಡುವ ಅವಶ್ಯಕತೆ ಅವರಿಗೆ ಕಂಡು ಬರಲಿಲ್ಲ, ಕಾಯಕವನ್ನೇ ಅನುಭಾವ ಮಟ್ಟಕ್ಕೇರಿಸಿದರು.

ಶರಣಮಾರ್ಗ ದ್ವೈತ, ವಿಶಿಷ್ಟಾದ್ವೈತ, ಅದ್ವೈತದ ಎಲ್ಲ ಹಂತಗಳನ್ನೂ, ಎಲ್ಲ ಮನೋಧರ್ಮಗಳನ್ನೂ ಒಳಗೊಳ್ಳುವ ಮಾರ್ಗವಾಗಿ ಪರಿಣಮಿಸಿತು. ವೈವಿಧ್ಯದಲ್ಲಿ ಏಕಸೂತ್ರವನ್ನು ಸಾಧಿಸುವ ಮಾರ್ಗ ಶರಣಮಾರ್ಗ, ಜ್ಞಾನನಿಧಿ ಅಲ್ಲಮ ಪ್ರಭುವಿನಂತಹ ತೀವ್ರ ವೈರಾಗ್ಯ, ಸಂಸಾರಯೋಗಿ ಬಸವಣ್ಣನವರ ಭಕ್ತಿ ಭಂಡಾರ, ಜ್ಞಾನಯೋಗಿ ಚನ್ನಬಸವಣ್ಣನ ಸಿದ್ಧಾಂತಸಾರ, ಸಿದ್ಧರಾಮನ ಕರ್ಮಯೋಗ, ಮಾಚಯ್ಯ ಮಾರಯ್ಯ ಮೊದಲಾದವರ ನಿಷ್ಠೆ–ಎಲ್ಲವೂ ಶರಣ ಮಾರ್ಗದಲ್ಲಿ ವಿಕಾಸಗೊಳ್ಳುತ್ತವೆ. ಅಕ್ಕಮಹಾದೇವಿಯಂತಹ ವೀರವಿರಾಗಿಣಿಗೆ ಪೋಷಣೆಯನ್ನಿತ್ತಂತೆಯೇ, ಸೋಳಿಗೆ ಮಾರಯ್ಯ ಪತ್ನಿ ಮಹಾದೇವಮ್ಮ, ಆಯ್ದಕ್ಕಿ ಮಾರಯ್ಯನ ಪತ್ನಿ ಲಕ್ಕಮ್ಮನಂತಹ ಸಾಧ್ವಿಯರಿಗೂ ಬೆಳಕನ್ನು ತೋರಿತು. ಅವರವರಿಗೆ ಅವರವರ ಮನೋಧರ್ಮಕ್ಕೆ ಅನುಗುಣವಾಗಿ, ಮಾರ್ಗವನ್ನು ರೂಪಿಸಿ ಮುನ್ನಡೆಸುವ ಶಕ್ತಿಯನ್ನು ಪಡೆದಿರುವುದೇ

ಶರಣರ ಅನುಭಾವ ಮಾರ್ಗದ ಹಿರಿಮೆ. ಪರಸ್ಪರ ವಿಚಾರ ಮಂಥನದಿಂದ ವ್ಯಕ್ತಿ ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕೆಂದು ನಂಬಿದ ಶರಣರು 'ಅನುಭಾವ' ಎಂಬ ಮಾತನ್ನು "ಅನುಭಾವಿ"ಗಳೊಡನೆ ನಡೆಯುವ ವಿಚಾರ ಮಂಥನ ಎಂಬ ಅರ್ಥದಲ್ಲಿಯೂ ಉಪಯೋಗಿಸಿರುವುದು ಕಂಡುಬರುತ್ತದೆ. ಲಿಂಗಾಂಗ ಸಾಮರಸ್ಯವನ್ನು ಪಡೆದ ಅನುಭಾವಿಗಳೊಡನೆ ನಡೆಸುವ ವಿಚಾರಗೋಷ್ಠಿ-ಎಂಬ ಅರ್ಥವನ್ನು ಅದಕ್ಕೆ ಕೊಡುತ್ತಾರೆ. ಹೀಗೆ ವಿಚಾರ ಪ್ರಧಾನವಾದುದರಿಂದಲೇ ಶರಣರ ಅನುಭಾವ ಮಾರ್ಗ ಇಂದಿನ ವಿಚಾರವಾದಿಗಳಿಗೂ ಹಿಡಿಸುವಂತಹ ವೈಚಾರಿಕ ಮಾರ್ಗದಲ್ಲಿ ಬೆಳೆದುಬಂದಿದೆ.

ನಿನ್ನೊಡವೆ ಎಂಬುದು ಜ್ಞಾನರತ್ನ.
ಸಾಧನಾ ಮಾರ್ಗದಿಂದ ಸಿದ್ಧಿ ಲಭಿಸುತ್ತದೆ.

ಆಹಾರ ವಿಹಾರಗಳಲ್ಲಿ ನಿಯಮ ಪಾಲನೆ ಇರಬೇಕು.
ನಡೆ-ನುಡಿಗಳು ನಮ್ಮ ವ್ಯಕ್ತಿತ್ವವನ್ನು ಹೊರಗೆಸುತ್ತವೆ.

ಆಚರಣೆ ಇಲ್ಲದ ಕೃತಿ ಒಡಕು ಮಡಿಕೆ ನುಡಿದಂತೆ.
ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ.

ಶರಣರ ವಾಣಿ



(9 ನೇ ಪುಟದಿಂದ)

ವಿದ್ಯೆಯನ್ನು ಕಲಿಯುವಾಗ, ನಾವು ಕಲಿಯುವುದರಲ್ಲಿ ಆಸಕ್ತಿಯಿರಬೇಕು. "ನಾನು ಚೆನ್ನಾಗಿ ಓದಿ ವಿಷಯಗಳನ್ನು ತಿಳಿದುಕೊಂಡು ಅದರಲ್ಲಿ ಪಾರಂಗತನಾಗಬೇಕು" ಎಂಬ ಗುರಿಯೆಡೆಗೆ ಸದಾ ಗಮನವನ್ನು ಇಡಬೇಕು. ಗುರಿಯಿದ್ದರೆ ಅದನ್ನು ಮುಟ್ಟಲು ಪ್ರಯತ್ನ ತಾನೇತಾನಾಗಿ ಸಾಗುತ್ತದೆ. ಹೀಗಾದಾಗ ಅಭ್ಯಾಸದ ಜೀವನ ಸುಖಮಯವಾಗುತ್ತದೆ.

ವಿದ್ಯಾರ್ಥಿಯಾದವನು ದಿನಂಪ್ರತಿ ಒಂದು ನಿರ್ದಿಷ್ಟವಾದ ವೇಳಾಪಟ್ಟಿಯನ್ನು ಗೊತ್ತುಮಾಡಿಕೊಳ್ಳಬೇಕು. ಮುಂಜಾನೆ ೫ ಗಂಟೆಗೆ ಏಳಬೇಕು. ಸ್ವಲ್ಪಕಾಲ ವ್ಯಾಯಾಮಮಾಡಬೇಕು. ನಂತರ ದೈನಂದಿನ ಕಾರ್ಯಗಳನ್ನು ಮುಗಿಸಿ, ಸ್ನಾನ, ಪೂಜೆ ಮಾಡಿ ಶ್ರದ್ಧೆಯಿಂದ ಓದಲು ಕುಳಿತುಕೊಳ್ಳಬೇಕು. ಎರಡು ಗಂಟೆಗಳು ಸತತವಾಗಿ ಅಭ್ಯಾಸಮಾಡಬೇಕು. ಕಷ್ಟಕರವಾದ ಭಾಗಗಳನ್ನು ಬೆಳಗಿನ ಸಮಯದಲ್ಲಿಯೂ, ಬರವಣಿಗೆಯನ್ನು ಮಧ್ಯಾಹ್ನದ ವೇಳೆಯಲ್ಲಿಯೂ, ದಿನಂಪ್ರತಿಯ ಪಾಠಗಳನ್ನು ರಾತ್ರಿ ವೇಳೆಯಲ್ಲಿಯೂ ಅಭ್ಯಾಸಮಾಡಬೇಕು. ಮಿತಾಹಾರಿಯಾಗಿ ಉತ್ತಮ ಸ್ನೇಹಿತರ ಸಂಪರ್ಕದಿಂದ ಉತ್ತಮ ನಡವಳಿಕೆಯನ್ನು ಅಳವಡಿಸಿಕೊಳ್ಳಬೇಕು.

ಮಾತು ಸತ್ಯವಾಗಿರಬೇಕು. ನಮ್ಮ ಇಂದ್ರಿಯಗಳಿಂದ ಶರೀರದ ಅಂಗಗಳಿಂದ ಬೇರೆಯವರಿಗೆ ತೊಂದರೆಯಾಗದಂತೆ ನಡೆದುಕೊಳ್ಳಬೇಕು. ನಾವು ನಮ್ಮ ನಡವಳಿಕೆಗಳನ್ನು ಸದಾ ಜಾಗರೂಕರಾಗಿ ಕಾಯ್ದುಕೊಳ್ಳಬೇಕು. ಉತ್ತಮ ನಡವಳಿಕೆಯನ್ನು ನಮ್ಮಲ್ಲಿ ತಂದುಕೊಳ್ಳುವುದು. ಒಂದುಸಾರಿ ಅದನ್ನು ಅಳವಡಿಸಿಕೊಂಡರೆ ಅದು ನಮ್ಮಿಂದ ಯಾವತ್ತಿಗೂ ದೂರಹೋಗುವುದಿಲ್ಲ.

ಗಾಂಧೀಜಿಯವರು "ನಾನು ಸತ್ಯವನ್ನು ನುಡಿಯುತ್ತೇನೆ" "ಹಿಂಸೆಯನ್ನು ಮಾಡುವುದಿಲ್ಲ" ಎಂದು ಪಣ ತೊಟ್ಟರು. ಹಾಗೆಯೇ ಅವರ ಜೀವನ ಪರ್ಯಂತ ನಡೆದುಕೊಂಡರು ಕೊನೆಗೆ ಅವರಲ್ಲಿ ಅವರು ಜಯಗಳಿಸಿ "ಮಹಾತ್ಮ"ರಾದರು. ಹೀಗೆ ನಡೆ-ನುಡಿ ಒಂದಾದಾಗ ಪ್ರತಿಯೊಬ್ಬರೂ ಉತ್ತಮರಾಗಬಹುದು.
ವಿದ್ಯಾಭ್ಯಾಸ ಇದನ್ನು ನೀಡುತ್ತದೆ.

* * * * *

ಶಿವಪಥವರಿವಡೆ ಗುರುಪಥವೇ ಮೊದಲು.
ಲೋಕದಲ್ಲಿ ಹುಟ್ಟಿದಬಳಿಕ ಸ್ತುತಿ ನಿಂದೆಗಳು ಬಂದರೆ
ಸಮಾಧಾನಿಯಾಗಿರ ಬೇಕು.
ಮೃದುವಚನವೇ ಸಕಲ ಜಪಂಗಳಯ್ಯ.

* * * * *

"ಶರಣರವಾಣಿ"

